# ಶ್ರೀರಾಮಚರಿತವು

20015

# ಯೋಧ್ಯಾಕಾಂಡವು

(ಪೂರ್ವಾರ್ಧವು)

ಸಾಲಿ ರಾಮಚಂದ್ರರಾಯರಿಂದ ವಿರಚಿತವಾದುದು

---

ಇದೊಂದು ಮಹಾಕಾವ್ಯ. ಲಕ್ಷಣಗ್ರಂಥಗಳಲ್ಲಿ ಹೇಳಿದ ಲಕ್ಷಣಗಳು ಇದರಲ್ಲಿಲ್ಲವೆನಿಸಿದರೂ ಇದು ಮಹಾಕಾವ್ಯ, ಇಲ್ಲವೆಂದು ಇದು **ಇಂದಿನ** ಮಹಾಕಾವ್ಯ. ಕತೆಯನ್ನು ಹಾಡುವ, ಕಟ್ಟುವ, ಕಟ್ಟಿ ಬೆಳೆಸುವ, ಬೆಳೆಸುವಾಗ ತಿಳಿಪಿಸುವ ಶೈಲಿಯಿಂದ; ಸ್ವಭಾವನಿರೂಪಣಾಶಕ್ತಿ-ಸಾಮರ್ಥ್ಯದಿಂದ; ವಿಶಾಲಸೃಷ್ಟಿಯ ರಚನೆಯಿಂದ; ಜೀವನಕ್ಕಿಂತ ಭಾವನೆಗೆಯೆ ತಾತ್ತ್ವಿಕವಾಗಿ ಸಂಬಂಧಿಸಿದ ಕಲೆಗಾರಿಕೆಯಿಂದ ಈ ಶ್ರೀರಾಮಚರಿತವು ಇಂದಿನ ಸಾಹಿತ್ಯದ ಆದಿಕಾವ್ಯವೆನಿಸುವುದು. ಇಂದು ನಮ್ಮಲ್ಲಿ ಮಹಾಕಾವ್ಯಗಳಿಲ್ಲವೆಂದು ರಸಿಕರು ಹಳಹಳಿಸುವಾಗ ಮಹಾಕಾವ್ಯಕ್ಕೂ ಸ್ಫೂರ್ತಿಯನ್ನು

ತೆ ನಮ್ಮ ಸಂಸ್ಕೃತಿ ಬೆಳೆಯುತ್ತಲಿದೆ ಎಂದು
ಶ್ರೀ. ರಾಮಚಂದ್ರರಾಯರಿಗೆ ಅಭಿನಂದನೆ,
ಸಂಸ್ಕೃತದ ನಾದರ ಮುಂದಿರುವಾಗಲೂ
ಲ್ಲಿ ಹಾಡಿದ ಕವಿಯ ಹೃದಯವು ಕನ್ನಡ, ಕನ್ನಡಿ.

**ಆರ್. ವಿ. ಜಾಗೀರದಾರ**

ಎಂ. ಎ. (ಲಂಡನ)

ಶ್ರೀರಾಮಚರಿತವು ಕಾವ್ಯವು ! ಶ್ರೀರಾಮ
ಚಂದ್ರನ ಚಿರನೂತನ—ಚರಿತವು ಕಥಾವಸ್ತು.
ಶ್ರೀ. ರಾಮಚಂದ್ರರಾಯರು ಕವಿ !

ಭಾವಭಾಷೆಗಳು ಕಾವ್ಯಪುರುಷನ ಜೀವದೇವ
ಗಳು. ಕಾವ್ಯದಲ್ಲಿ ನಿರೀಕ್ಷಿತವಾದ ಈ ಎರಡರ
ಪರಿಶುದ್ಧಿಯೂ ಈ ಉತ್ತಮಕಾವ್ಯದ ಆಸ್ವಾದ
ಸಾಮಗ್ರಿ. ನಿಮ್ಮ ಕಾವ್ಯವು ರಸದೇವನ ನೆಲೆ
ವೀಡು. ನಿಮ್ಮ ಕಾವ್ಯನದಿ ಪರಿಶುದ್ಧ ಭಾಷಾ
ಪ್ರವಾಹದ ಸೊಗಸಿನ ನಿರ್ಮಲ ಝರಿ.

ರಾಮಚಂದ್ರರಾಯರೆ, ನಿಮ್ಮ ಕಾವ್ಯನಿರ್ಮಾ
ಣಕ್ಕೆ ನಿಮ್ಮ ಪಾತ್ರತೆಯೆ ಮಹಾಪ್ರೇರಣೆಯು
ಪೂರ್ಣಕಾರಣವಾದುದಾದರೂ ನಾನೂ ಒಮ್ಮೆ
ಈ ವಿಷಯದಲ್ಲಿ ಸೂಚಿಸಿದ್ದೆನು. ಅದೀಗ ಸಫಲ
ವಾಯಿತೆಂಬುದೂ ನನಗೆ ಅಭಿಮಾನದ ವಿಷಯ
ವಾಗಿದೆ.

ಶ್ರೀರಾಮಚರಿತವು ಸ್ವಮಹಿಮೆಯಿಂದಲೇ
ಸದಾ ವಿಜಯಶಾಲಿ !

ಮ. ಪ್ರ. ಪೂಜಾರ

(ಬೆಲೆ: ೧೦ ಆಣೆ)

# ಶ್ರೀರಾಮಚರಿತವು

# ಅಯೋಧ್ಯಾಕಾಂಡವು

(ಪೂರ್ವಾರ್ಧವು)

ಮೊದಲನೆಯ ಆವೃತ್ತಿ

೧೯೩೫

ಸಾಲಿ ರಾಮಚಂದ್ರರಾಯರು

ನನ್ನ ಪರಮಮಿತ್ರರಾದ

**ರಂಗಾಚಾರ್ಯ ಅಪ್ಪಾಚಾರ್ಯ ಜಹಾಗಿರದಾರ**

ಎಮ್. ಎ., ಎಲ್ ಎಲ್. ಬಿ. ಅಡ್ವೋಕೇಟ, ಮುಂಬಯಿ

ಇವರಿಗೆ.

# ನೀವು

**ಸತಾಂ ಸದ್ಭಿಃ ಸಂಗಃ ಕಥಮಪಿ ಹಿ ಪುಣ್ಯೇನ ಭವತಿ**

ಎಂಬುದರ ತಿರುಳನ್ನು

**ನನಗೆ**

ತಿಳಿಹಿದಿರಿ

ಉಣಿಸಿದಿರಿ

# ಪ್ರಕಾಶಕರ ನಿವೇದನ

ಶ್ರೀರಾಮಚರಿತದ ಬಾಲಕಾಂಡವು ಪ್ರಕಟವಾದ ಒಳಿಕ ಅಲ್ಪಾವಧಿಯಲ್ಲಿಯೆ ಅಯೋಧ್ಯಾಕಾಂಡವನ್ನು ಕನ್ನಡಿಗರ ಕೈಯಲ್ಲಿ ಕೊಡಲು ಅನುಕೂಲವಾದುದು ಭಕ್ತವತ್ಸಲನಾದ ಶ್ರೀರಾಮಚಂದ್ರನ ದಯೆಯೆ ಸರಿ. ಬಾಲಕಾಂಡವನ್ನು ಗೌರವಿಸಿದ ಎಲ್ಲ ವಿದ್ವಜ್ಜನರಿಗೂ ಅದಕ್ಕೆ ಕ್ರಿಯಾಯುಕ್ತವಾದ ಸಹಾನುಭೂತಿಯನ್ನು ತೋರಿಸಿದ ಕನ್ನಡ ಜನತೆಗೂ ನಾವು ಋಣಿಯಾಗಿರುವೆವು. ಮೊದಲನೆಯ ಆವೃತ್ತಿಯ ಪ್ರತಿಗಳೆಲ್ಲವು ತೀರಿದುದರಿಂದ ಈಗ ನಾವು ಎರಡನೆಯ ಆವೃತ್ತಿಯನ್ನು ಹೊರಡಿಸುವುದರಲ್ಲಿ ತೊಡಗಿರುವೆವು. ಬಾಲಕಾಂಡದಂತೆಯೆ ಅಯೋಧ್ಯಾಕಾಂಡವೂ ಜನರ ಮೆಚ್ಚುಗೆಗೆ ಪಾತ್ರವಾಗುವುದೆಂದು ನಾವು ನಂಬಿದ್ದೇವೆ.

ಈ ಪುಸ್ತಕದಲ್ಲಿ ಅಯೋಧ್ಯಾಕಾಂಡದ ಪೂರ್ವಾರ್ಧವು ಪ್ರಕಟವಾಗಿರುವುದು. ಉತ್ತರಾರ್ಧವು ಮುಂದಿನ ಪುಸ್ತಕದಲ್ಲಿ ಬೇಗನೆ ಪ್ರಕಟವಾಗುವುದು.

| ಕರ್ನಾಟಕ ಹೈಸ್ಕೂಲು<br>ಧಾರವಾಡ<br>ಯುವಸಂವತ್ಸರ<br>ಅಕ್ಷಯ್ಯತೃತೀಯೆ | ವಾಮನ ರಾಮಚಂದ್ರ<br>**ಮುಧೋಳಕರ**<br>ಕಾರ್ಯದರ್ಶಿ<br>ಸಾಹಿತ್ಯ ಸೇವಾ ಸಮಿತಿ |
|---|---|

# ಮುನ್ನುಡಿ

ಶ್ರೀರಾಮಚರಿತದ ಬಾಲಕಾಂಡವನ್ನು ರಸಿಕರು ಸವಿಸವಿದು ತಣಿಯುವಷ್ಟರಲ್ಲಿಯೇ ಅಯೋಧ್ಯಾ-ಕಾಂಡದ ಪೂರ್ವಾರ್ಧವನ್ನು ಕನ್ನಡಿಗರ ಮುಂದಿರಿಸುತ್ತಲಿರುವ ಶ್ರೀಮಾನ್ ಸಾಲಿ ರಾಮಚಂದ್ರರಾಯರು ವಿಶೇಷವಾದ ಅಭಿನಂದನೆಗೆ ಪಾತ್ರರಾಗಿದ್ದಾರೆ. ಬಾಲಕಾಂಡದ ಅಂತರ್ಬಾಹ್ಯ ಸೌಂದರ್ಯಗಳಿಗೆ ಮನಸೋತು ಹಲವರು ಮನವಾರೆ ಹೊಗಳುತ್ತಿರುವುದನ್ನು ನೋಡಿದರೆ ಇಂತಹ ಕಾವ್ಯವೊಂದು ಜನತೆಗೆ ಬೇಕಾಗಿತ್ತೆಂಬುದು ಸ್ಪಷ್ಟವಾಗುವುದರಿಂದ ಈ ಅಯೋಧ್ಯಾ ಕಾಂಡವಾದರೂ ಮೆಚ್ಚುಗೆಯನ್ನು ಪಡೆಯಬಹುದು. ಇಲ್ಲಿ ಶ್ರೀಮಾನ್ ಸಾಲಿಯವರ ಕಾವ್ಯಗಳಲ್ಲಿ ಸಾಮಾನ್ಯವಾಗಿ ತೋರುವ ಸೊಗಸೆಲ್ಲವೂ ಇರುವುದಲ್ಲದೆ ಶ್ರೀರಾಮನ ಉದಾತ್ತ ಜೀವನವು ಇನ್ನೂ ಸ್ಫುಟವಾಗಿ-ರುವುದೊಂದು ವಿಶೇಷವಾಗಿದೆ. 'ಸದ್ಗುಣ ಧಾಮ'ನಾಗಿ 'ಲೋಕಕ್ಷೇಮಾವಹ'ನಾಗಿರುವ ಈ ಮಹಾಮಹಿಮನು-ತಂದೆಯೊಡನೆ, ತಾಯಂದಿರೊಡನೆ, ತಮ್ಮಂದಿರೊಡನೆ, ಸೀತೆಯೊಡನೆ, ಇನ್ನಿತರರೊಡನೆ ವರ್ತಿಸುವ ಉಚಿತವಾದ, ಉದಾರವಾದ, ನಯವಾದ ರೀತಿಯನ್ನು ನೋಡಿದರೆ ಅವನ ಜೀವನದ ರಹಸ್ಯವೇ ಹೊಳೆಯುವಂತಿದೆ. ಈ ಕಾರಣದಿಂದ ಈ ಭಾಗವು ಇನ್ನಷ್ಟು ಮನ್ನಣೆಯನ್ನು

ಪಡೆಯಬಹುದಾಗಿದೆ. ರಸಿಕರಾದ ಕನ್ನಡಿಗರು ಕಾವ್ಯವನ್ನು ಉಚಿತವಾದ ರೀತಿಯಲ್ಲಿ ಬರಮಾಡಿಕೊಂಡು ಆನಂದಪಡಲೆಂದು ಹಾರೈಸುವ

ಕರ್ನಾಟಕ ಕಾಲೇಜ
ಧಾರವಾಡ
೫–೫–೩೫

ಎ. ಟಿ. ಸಾಸನೂರ

ಶ್ರೀಃ

# ಶ್ರೀರಾಮಚರಿತವು

## ಅಯೋಧ್ಯಾಕಾಂಡವು

( ಪೂರ್ವಾರ್ಧವು )

### ಪ್ರಥಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಎನಿತೋ ದಶರಥ-
ಜನಪನ ಸುಕೃತವು !
ಅನುಪಮಗುಣಿ ರಾ-
ಮನು ಮಗನವನಾ ೨

ಭ್ರಾಜತ್ಸತ್ವನು
ರಾಜಸುತನು ರಾ-
ರಾಜಿಸುತಿರುವನು
ತೇಜದ ರಾಶಿ ೩

ದಾಂತನು ಬಾಹ್ಯಾ-
ಭ್ಯಂತರಶುಚಿಯು-
ತ್ಯಂತಕುಶಲಮತಿ
ಶಾಂತಪ್ರಕೃತಿ ೪

ಪಿತೃಶುಶ್ರೂಷಾ-
ರತಿಯುವನು ಕುಲೋ-
ಚಿತಮತಿ ಭಾಸ್ವತ್ಾ-
ಪ್ರತಿಭಾಶಾಲಿ ೫

ಮೃದುಭಾಷಿ ಕಲಾ-
ವಿದನು ಸಮುನ್ನತ-
ಹೃದಯನು ಕಂಗೊಳಿ-
ಸಿದನು ದಯಾಬ್ಧಿ ೬

ಯೋಜಿಸಲೆಳಸಿದ-
ನೋಜೋನಿಧಿಯನು
ರಾಜನೊಸೆದು ಯುವ-
ರಾಜಪದದೊಳು ೭

ಅರಸನು ಕರೆಯಿಸೆ,
ನೆರೆದರು ಸಾಮಂ-
ತರು, ಸಚಿವರು, ಮಾ-
ನ್ಯರು ಸಭೆಯಲ್ಲಿ ೮

ಜನಪತಿಯೀಪ್ಸಿತ-
ವನು ತಿಳಿಹಿದನೆಂ-
ದನು, "ಬೇಕ್ಕೈ ನಿ-
ಮ್ಮನುಮತಿಯಿದಕೆ" ೯

ಒತರಿಸಲಾತನ
ನುಡಿ ಸಮ್ಮುದವನು,
ನುಡಿದರು ಸಭ್ಯರು
ಪೊಡವಿಯ ಪತಿಗೆ ೧೦

"ಯುವರಾಜನು ನಮ-
ಗವನಿರಲಿ ಗುಣಾ-
ರ್ಣವನು, ಮಹೀಪತಿ,
ಸುವಿವೇಕನಿಧಿ ೧೧

"ಅಸಮಪರಾಕ್ರಮಿ-
ಯೆನಿಸೆವನುದಾತ್ತನು
ದೆಸೆಗಳು ಸುಯಶಃ-
ಪ್ರಸರದೆ ಬೆಳಗೆ ೧೨

"ಜಯಶಾಲಿ ಜನ-
ಪ್ರಿಯನೂರ್ಜಿತಧನು
ನಯಕೋವಿದನ-
ಕ್ಷಯವಿಕ್ರಮನು ೧೩

"ದೊರೆಯಾರವನಿಗೆ,
ಧರಣೀಂದ್ರನೆ, ರಘು-
ವರನಿಗೆ ಧರೆಯೊಳು
ನರರೆಂಬರೊಳು? ೧೪

"ಅವನೀಶನೆ, ಮಾ-
ಡುವುದೈ ಶ್ರೀರಾ-
ಘವನನು ಬೇಗನೆ
ಯುವರಾಜನನು" ೧೫

ಶ್ರೀರಘುವೀರನ
ಚಾರುಸ್ತುತಿರವ-
ಪೂರಿತಸಭೆ ಸೊಂ-
ಪೇರಿಸೆದಿತ್ತು ೧೬

ವನಧಿತರಂಗ-
ಸ್ವನಗಂಭೀರವು
ಜನನಿವಹಧ್ವನಿ
ಜನಪನ ಸಭೆಯಾ ೧೭

ಗುರುಗೆಂದನು ಸ-
ಭ್ಯರ ನುಡಿಯನು ಕೇ-
ಳ್ದರಸನು ಹಿಗ್ಗುತೆ,
ಸುರಿಯೆ ಸುಖಾಶ್ರು ೧೮

" ಇವರಿತ್ತರು ರಾ–
ಘವನಭಿಷೇಕೋ–
ತ್ಸವಕನುಮತಿಯನು
ಸುವಿಮಲಯಶನಾ ೧೯

" ಗುರುವೆ, ಮನೋರಥ–
ತರು ಕುಸುಮಿತವಾ–
ಯ್ತೈರೆಯೆ ಜಲವನ–
ಳ್ಕರಿಸಲಿ ಜನರು ೨೦

" ಸುದಿನವಿದುದಯಿಸಿ–
ದುದು ನಿನ್ನಯ ಪಾ–
ದದ ಕೃಪೆಯಿಂದವೆ,
ಸದಮಲಹೃದಯಾ! ೨೧

" ಕೊನೆಯಾಸೆಯಿದೊಂ–
ದೆನಗೀಯುತ್ಸವ–
ವನು ನೋಳ್ಪುದು ಕಣ್–
ಮನವಾರೆ, ಮುನೀ! ೨೨

" ಮನದೀ ಕಾಮನೆ–
ಯನು ಕೈಗೂಡಿಸು,
ಮುನಿನಾಥಾ, ನಾ–
ಳಿನ ದಿವಸದಲಿ" ೨೩

ಮುನಿಯಾಲಿಸಿ ನುಡಿ-
ದನು, “ ನಿನ್ನಭಿಮತ
ವನು ಸಲಿಸಲು ದೇ-
ವನು ಬಲ್ಲಿದನು ೨೪

“ ನೆರಹು ಸುಮಸ್ತ್ರಾಸಿ-
ಕರವನು, ದೇವರ
ನೆರವನು ಯಾಚಿಸು,
ಧರಣೀನಾಥಾ ! ” ೨೫

ಪರಮಾನಂದದ-
ಲರಸನು ನುಡಿದನು,
“ ಗುರು, ನಡೆವೆನು ನೀ-
ನೊರೆದಂತೆಂ ”ದು ೨೬

ಸಲಿಸಲಿದರು ಮನ-
ದಲಿ, ‘ ನೃಪ ಜಯ ! ’ವೆಂ-
ದುಲಿದರು ಬಲ್ದನಿ-
ಯಲಿ ನೆರೆದವರು ೨೭

ಕರೆದು ಸುಮಂತ್ರನ-
ನರಸನು ನುಡಿದನು,
“ ತ್ವರಿತದೆ ರಾಮನ
ಕರೆ ನೀನೆಂ ”ದು ೨೮

ಜನಪತಿಯೋಲಗ–
ವನು ತೀರಿಸಿ ನಡೆ–
ದನು ಸದನಕೆ ಮುನಿ–
ಯನು ಬೀಳ್ಕೊಂಡು ೨೯

ಬಂದನು ಜನತಾ–
ನಂದನನಿತರೊಳು
ಮಂದಸ್ಮಿತದಲಿ
ತಂದೆಯು ಬಳಿಗೆ ೩೦

ಚರಣಾಂಬುಜಗಳಿ–
ಗೆರಗಲವನು, ನ–
ಲ್ವರಕೆಗಳಿಂದಲಿ
ಹರಸಿದನರಸು ೩೧

ಪ್ರೇಮಾದರದಿಂ–
ದಾಮಹನೀಯನು
ರಾಮನು ನುಡಿದನು
ಕೈಮುಗಿದೆದ್ದು ೩೨

"ಇನಕುಲಭೂಷಣ,
ಜನಕನೆ, ನಿಮ್ಮದು
ನನಗೇನಾಣತಿ,
ಅನುರಾಗನಿಧೀ ?" ೩೩

ಮುದವಾಂತನು ವಿಸ-
ಯದಲಾತ್ಮಜನಾ-
ಡಿದ ಮಾತನು ಕೇ-
ಳಿದು ದಶರಥನು ೩೪

"ಯುವರಾಜನು, ರಾ-
ಘವ, ನಾಳೆಯೆ ಆ-
ಗುವೆ ತಳೆಯಲು ಭಾ-
ರವನು ಧರಣಿಯಾ ೩೫

"ಸುಡಿವೆನು ನಿನಗೊ-
ಳ್ನುಡಿಯನು, ಜನತೆಯ-
ಸಿಡಲಿರುವೆನು ನಿ-
ನ್ನುಡಿಯೊಳು, ರಾಮಾ ೩೬

"ಹಿರಿಯರು ಪಿತೃಗಳು,
ಸರಿಕರು ಬಂಧುಗ-
ಳರಿವುದು, ಮಗು, ಕಿರಿ-
ಯರು ಸುತರೆಂದು ೩೭

"ಪ್ರಜೆಗಳ ರಂಜನೆ
ಋಜುಚರಿತದ ಭೂ-
ಭುಜರಿಗೆ ಧರ್ಮವು,
ಸುಜನೋತ್ತಂಸಾ ೩೮

"ಜಯಿಗಳು ವಿಜಿತೇಂ-
ದ್ರಿಯರೈ, ಜಗವನು
ಜಯಿಸುವರಲ್ಲವು
ಜಯಶಾಲಿಗಳು ೩೯

"ಎಳೆವುದು ದಂಭವು
ಕೆಳಗೆ ಕೆಳಗೆ, ತಮ-
ದೊಳು ಮುಳುಗಿಸುವುದು
ಮುಳಿಸು ನರರನು ೪೦

"ವಿಷಯವು ಬಿರಿಮುಗು-
ಳಿನಿಗಂಪಿನವೊಲು
ಜನಿಯಿಸುವುದು ನಲ-
ವನು ಜನತೆಯಲಿ ೪೧

"ಜನರುತ್ಕರ್ಷವೆ
ಜನಪನ ಗುರಿಯೆಂ-
ದನವರತವು ನೆನೆ
ಮನದಲಿ, ರಾಮಾ ೪೨

"ವಿಲಸತ್‌ಸುಕೃತಕೆ
ನೆಲೆಯಾದೀರಘು-
ಕುಲದಭಿಮಾನಕೆ
ನೆಲೆ ನೀನಾಗೈ ೪೩

"ಗುರು ಹೇಳುವರಾ–
ತೆರದಲಿ ನೀನಿಂ–
ದಿರುಳಸು ಕಳೆ ದೇ–
ವರ ಪೂಜೆಯುಲಿ" ೪೪

ಅವಿಕೃತಮನದಿಂ–
ದವನೀಶನ ವಚ–
ನವನಾಲಿಸಿ ರಾ–
ಘವನು ನುಡಿದನು ೪೫

"ಇದು ವಚನವು ನ–
ನ್ನದು, ರಘುವಂಶಕೆ
ಒದಗದು ನನ್ನಿಂ–
ದೊದಗದು ಕೊರತೆ" ೪೬

ಮನದಲಿ ನಲಿದರ–
ಸನು ಹರಸಲು, ಬಂ–
ದನು ರಘುವೀರನು
ಜನನಿಯು ಬಳಿಗೆ ೪೭

ಇದು ಪ್ರಥಮಾಧ್ಯಾಯವು

ಶ್ರೀಃ

# ದ್ವಿತೀಯಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಜನನಿಯು ಸಂದ-
ರ್ಶನಕೆಂದೈತಂ-
ದನು ರಘುನಾಥನು
ಮನದೊಲವಿಂದೆ ೨

ಸ್ಥಿರಭಕ್ತಿಯಲೀ-
ಶ್ವರಚಿಂತನದಲಿ
ಬೆರೆತಿರುವಳು, ಮೈ-
ಯ್ಮರೆತಿಹಳವಳು ೩

ಕಿರುನಗೆ ಮೊಗದಲಿ
ಮಿರುಗುತಲಿರುವುದು,
ಅರೆಗಣ್ಣಿಂದಲಿ
ಹರಿವುದು ಜಲವು ೪

ಹೃದಯದ ಪಾವಿ-
ತ್ರ್ಯದ ಬೆಳ್ವೆಳಕದು
ವದನದೊಳೆಸೆವುದು
ಸುದತೀಮಣಿಯಾ ೫

ಜನನಿಯನೀಕ್ಷಿಸಿ
ಮನದೊಳಗೆಂದನು,
"ಜನಿಸಿದೆನಿವಳಲ-
ದೆನಿತು ಸುಕೃತಿಯೋ !" ೬

ಅನಿತರೊಳಲ್ಲಿಗೆ
ಜನಕಜೆ ಬಂದಳು,
ಜನನಿಯೊಡನೆ ಬಂ-
ದನು ಲಕ್ಷ್ಮಣನು ೭

ಧ್ಯಾನದಲವಳ ವಿ-
ಲೀನತೆಯನು ಕಂ-
ಡಾನತರಾದರು
ಮೌನದಲವರು ೮

ವರವರ್ಣಿನಿ ಕಣ್-
ದೆರೆದಳು, ನಲಿದಳು
ಹರಸುತವರನ-
ಕ್ಕರಿನಲಿ ಸಾಧ್ವಿ ೯

“ಬಂದುದದೇನೈ
ಕಂದಾ, ಸಂಜೆಯೊ-
ಳಿಂದಿಲ್ಲಿಗೆ ನೀ-”
ನೆಂದಳು ಮಹಿಷಿ ೧೦

“ಯುವರಾಜತ್ವವು,
ಸುವಿಮಲೆ, ನನಗಾ-
ಗುವುದೌ ನಾಳಿನ
ದಿವಸವೆ, ತಾಯೇ ೧೧

“ಕರೆಯಿಸಿ ನನಗಿಂ-
ತರಸನು ನುಡಿದನು,
ಅರುಹಲದನು ಬಂ-
ದಿರುವೆನು, ದೇವೀ ೧೨

“ನಿನ್ನಯ ಕೃಪೆಯಿರ-
ಲೆನ್ನೊಳು, ನೀನೆ-
ನ್ನುನ್ನತಿಕಾರಣ-
ವುನ್ನತಚರಿತೇ” ೧೩

ಮಗನಿಗೆ ನುಡಿದಳು
ನಗೆಮೊಗದಲಿ ಸತಿ,
“ಮಗು, ಬಾಳ್ಕೆ ಸುಕೃ-
ತಿಗೆ ನೆಲೆಯಾಗಿ ೧೪

"ಸಿರಿಯಿರಲಿರದಿರ -
ಲಿರದು ಕೊರತೆ, ಸ-
ಚ್ಚರಿತವು ಬಾಳಿನ
ತಿರುಳೈ, ರಾಮಾ ! ೧೫

"ನೆನೆ ರಘುಕುಲಜಾ-
ತನು, ದಶರಥತನ-
ಯನು, ಜನಕನಿಗಳಿ-
ಯನು, ನೀನೆಂದು ೧೬

"ಶಿವಮಸ್ತು ಸದಾ
ತವ, ರಾಮ, ತನೂ-
ಭವ, ರಘುಕುಲವೈ-
ಭವ, ಧೃತಿವೇರೋ !" ೧೭

ಜನನಿಯ ನುಡಿಗೇ-
ಳ್ದನುನಯದಿಂದವ-
ಳನು ವಂದಿಸಿ ನುಡಿ-
ದನು ದಾಶರಥಿ ೧೮

"ಇದು ಪಾವನವಾ-
ದುದು, ನೀವೆನಗೆಂ-
ದುದು, ನಡೆವೆನು ನಾ-
ನಿದನನುಸರಿಸಿ" ೧೯

ಎಂದು ಸುಮಿತ್ರಾ-
ನಂದನನೊಡನೈ-
ತಂದನು ತನ್ನಯ
ಮಂದಿರಕವನು ೨೦

ಇದು ಗೂಢವು, ಹಿತ-
ವೊದಗಲು ಪರರಿಗೆ,
ಎದೆಗುದಿ ಕುಜನರಿ-
ಗೊದವುವುದೇಕೋ ? ೨೧

ಅಲ್ಲಿಯು ಉತ್ಸವ-
ವಿಲ್ಲಿಯು ಉತ್ಸವ-
ವೆಲ್ಲೆಲ್ಲಿಯು ಪುರ-
ದಲ್ಲುತ್ಸವವು ೨೨

ಹೊಳೆವುವು ಬೀದಿಗ-
ಳೊಳು ಸಾಲ್ದೀವಿಗೆ-
ಗಳು, ಸುತ್ತೆಲ್ಲಿಯು
ಬೆಳಕೇ ಬೆಳಕು ೨೩

ದೆಸೆಗಳನು ಪಳಂ-
ಚಿಸುತೇರಿದುದಾ-
ಗಸಕೆ ಘನಧ್ವನಿ-
ಯೊಸಗೆವರೆಗಳಾ ೨೪

ತೆರತೆರದಲಿ ಸಿಂ-
ಗರಿಸಿರುವರು ಪೌ-
ರರು ಪುರವು ಮನೋ-
ಹರವಾಗೆಸೆಯೆ ೨೫

ಶ್ರೀರಾಮನ ಜಯ-
ಕಾರಧ್ವನಿ ದೊರೆ
ಕ್ಷೀರಾಂಬುಧಿಗಂ-
ಭೀರಸ್ವನಕೆ ೨೬

ಜನರಾವುತ್ಸವ-
ವನು ಕಂಡೊಡನೆಯೆ
ವನಿತೆಗದೊರ್ವಳಿ-
ಗೆನಿತೊಡಲುರಿಯೋ ! ೨೭

ಉರಿಯುರಿದಳು ಹ-
ಲ್ಮೊರೆದಳು ಮಂಥರೆ
ಪರುಷಾಶಯೆ ಕಿಂ-
ಕರಿ ಕೇಕಯಿಯಾ ! ೨೮

ಏಕದು ತಂದಳೊ
ಶೋಕಾವಹೆಯನು
ಕೇಕಯಿ ತವರಿಂ-
ದಾಕುಬ್ಜೆಯನು ? ೨೯

ಸಿಡಿಮಿಡಿಗೊಳುತಲಿ
ನಡೆದಳು ಕೇಕಯಿ–
ಯೆಡೆಗಾಕುತ್ಸಿತೆ
ಕಿಡಿಕಿಡಿಯಾಗಿ ೩೦

ಪುರದಾನಂದವ–
ನುರಿಹಲಿಕವಳಾ–
ಬಿರುನುಡಿಗಳಲೆನಿ–
ತಿರುವುದೊ ನಂಜು ! ೩೧

"ಹೊರಗೆತ್ತಲು ಪೌ–
ರರು, ನೋಡೌ, ನೆರೆ–
ದಿರುವರು, ನಲಿವರು
ಪರಮೋತ್ಸವದೆ ೩೨

"ಕೇಳೌ ರಾಮನು
ನಾಳಿನ ದಿನದಲಿ
ಆಳುವನಹನವ–
ನೇಳಿಗೆಯಹುದು ! ೩೩

"ಸವತಿಯ ಮಗನಿಗೆ
ಯುವರಾಜತ್ವವು !
ಬವಣೆಗೆ ಗುರಿ ನಿ–
ನ್ನವನು ಭರತನು ! ೩೪

"ಮೋಸಕೆ ಸಿಲುಕಿದೆ-
ಯೀಸುದಿನವು ನೀ-
ನ್ನೈಸಿರಿ ನಿನ್ನದು
ಬೇಸಗೆಯು ಹೊಳೆ !" ೩೫

ಕುದಿದಿಂತವಳೆಂ-
ದುದನಾಲಿಸಿ ನಡು-
ಗಿದುದೆದೆ ಬಲುನೊಂ-
ದುದು ಕೇಕಯಿಯಾ ೩೬

"ಇದು ಭೀಷಣವಾ-
ದುದು ನುಡಿ ನೀನೆಂ-
ದುದು, ನುಡಿದೈ ಭೇ-
ದದ ಮಾತನಲೇ ! ೩೭

"ಭರತನವೋಲೆ-
ಲ್ಲರು ಮಕ್ಕಳು, ನಾ-
ನರಿಯೆನೆಲೌ ಮಂ-
ಥರೆ, ಭೇದವನು ೩೮

"ಪ್ರೇಮಾಂಭೋನಿಧಿ
ರಾಮನು ಸದ್ಗುಣ-
ಧಾಮನು ಲೋಕ-
ಕ್ಷೇಮಾವಹನು ೩೯

“ಅವನಿಗೆ ಕೊಡುವನು
ಯುವರಾಜತ್ವವ-
ನವನೀಪತಿಯುಚಿ-
ತವನೆಸಗುವನು ೪೦

“ಹಿರಿಯನು ರಾಮನು,
ಹಿರಿಯನಿಗಾಳಿಕೆ-
ಯಿರಬೇಕೆಂಬುದು
ಹಿರಿಯರ ನೀತಿ ೪೧

“ಸುವಿಮಲರೌ ರಾ-
ಘವರವರಲಿ ಮೋ-
ಸವು, ಮಂಥರೆ, ಸಂ-
ಭವಿಸುವುದೆಂತೌ ? ೪೨

ಎಲ್ಲರಿಗಿದರಿಂ-
ದುಲ್ಲಸವಿರುತಿರೆ,
ಖುಲ್ಲತನವು ನಿನ-
ಗೆಂಲ್ಲಿಂದಾಯ್ತೌ ? ೪೩

“ಅಹಿತವನೆಸಗಲು
ಬಹುದೇನೆ ಜಗತ್-
ಸುಹೃದನಿಗೆ ರಘೂ-
ದ್ವಹನಿಗೆ ನಾನು ? ೪೪

"ಕೆಡುಕನು ನುಡಿದೈ !
ಪುಡಿಗೂಡದೆ ಹೆಸ–
ರೆಡರಸು ಮಂಗಲ–
ಕೊಡರಿಸಿದವರಾ ! ೪೫

"ಪ್ರಿಯನೆನಗೆ ಶುಭಾ–
ಶ್ರಯನಾರಾಮನು !
ಭಯವವನಿಂದೆ–
ಲ್ಲಿಯದೌ ಎನಗೆ ? ೪೬

"ಗೆಲುವಾಗಲಿ, ಮಂ–
ಗಲವಾಗಲಿ ರಘು–
ಕುಲಮೌಳಿಗೆ, ಬೆಳ–
ಗಲಿ ಯಶವವನಾ !" ೪೭

ಒಲಿದೊಲಿದಿಂತೆನು–
ತಲಿ ಕೇಕಯಿ ಗುಣ–
ಸಿಲಯನನಕ್ಕರಿ–
ಸಲಿ ಹರಸಿದಳು ೪೮

**ಇದು ದ್ವಿತೀಯಾಧ್ಯಾಯವು**

ಶ್ರೀಃ

## ತೃತೀಯಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಉರಿಯೊಳಗೆಣ್ಣೆಯ-
ನೆರಚಿದವೊಲು ಮಂ-
ಥರೆಯ ಹೃದಯದುರಿ-
ಯುರಿದುದು ಮಸಗಿ ೨

ಎದೆಯೊಳು ಕುದಿದು-
ಕ್ಕಿದಸೂಯೆಯೆ ಆ-
ದುದು ಮಂಥರೆಯಾ-
ಡಿದ ಬಿರುವಾತು ! ೩

ಮರುಳೀಕೆಯನಾ-
ವರಸಿದುದೆಂತೋ ?
ಅರಿವುದೊರೆದು ಮೆ-
ಯ್ಮರೆದಳದೆಂತೋ ? ೪

"ಭರತನಯೋಧ್ಯೆಯೊ-
ಳಿರದಿಹ ಸಮಯವ-
ನರಸಿಹನೌ ನಿ-
ನ್ನರಸು ವಿಮಲನು ! ೫

"ಪ್ರೀತಿಯು ತಮ್ಮನು
ಮಾತುಳನಲ್ಲಿರೆ,
ಪಿತಕೆ ರಾಮನಿ-
ಗಾತುರತೆಯಿದು ? ೬

"ಭರತನ ಭಯವಾ-
ವರಿಸಿರಲಿನಿತಾ-
ತುರತೆಯಿವರಿಗೆಂ-
ದರಿವುದು ತಪ್ಪೇ ? ೭

"ಹೃದಯವು ಭಯಕಾ-
ಸ್ಪದವಾಗಿರಲಾ-
ವುದು ಮನುಜನು ಮಾ-
ಡದಪಾಯವದು ? ೮

"ಅರೌ ತನ್ನಧಿ-
ಕಾರಕೆ ಭಂಗವ
ಸೈರಿಸುವವನೀ-
ಧಾರಿಣಿಯಲ್ಲಿ ೯

"ಹೊರಗಿರುವವನನು
ಹೊರಗನವರತವು
ಇರಿಸಲು ಯತ್ನಿಸ-
ದಿರನೆ ರಘುಪತಿ ೧೮

"ಭರತನಯೋಧ್ಯೆಗೆ
ಬರಲಿಚ್ಛಿಸಿದೊಡೆ,
ಬರಲೀವರೆ ಭಯ-
ಭರಿತಹೃದಯರು ? ೧೯

"ಹತಭಾಗಿನಿ, ದು-
ರ್ಗತಿವಶೆಯಾದ್ಯೆ !
ಸುತದರ್ಶನವಿ-
ಸ್ಮೃತಿಕಾರಿಣಿವಲೇ ! ೨೦

"ಐಸಿರಿಯೆಲ್ಲವು
ಕೌಸಲ್ಯೆಗೆ, ನಿನ-
ಗಾಸರವಿಲ್ಲವು,
ದಾಸಿಯುವಳಿಗೆ ! ೨೧

"ಬಗೆಬಗೆಯಿಂದಲಿ
ಹಗೆಗಳ ಕೀಳ್ಗ-
ಯ್ಮೆಗೆ ಗುರಿಯಾಗಿಹ
ಮಗನನು ಕಾಯೌ !" ೨೨

ಅದೊ ಮಂಥರೆ ಹರ–
ಿದ ಬಲೆಯೊಳು ಸಿಲು–
ಕಿದಳಕಟಾ ಅರಿ–
ಯದೆ ಕೈಕೇಯಿ ! ೧೫

ಅರಮನೆಯಾದುದು
ಸೆರೆಮನೆಯುವಳಿಗೆ !
ಅರಸನನೆಣಿಸಿದ–
ಳರಿಯೆಂತವಳು ! ೧೬

ಒಡರಿತಿದೇನೆಂ–
ದಡಿಗಡಿಗಂಗನೆ
ನಿಡುಸುಯ್ದಳು, ಬಲು
ನಡುನಡುಗಿದಳು ೧೭

"ಸುತನನು ಕಳುಹಲು
ಮತಿಯೇಕಾಯ್ತೋ ?
ಅತಿಕಠಿಣವು ದೆಸೆ !
ಗತಿಯಿನ್ನೇನು ? ೧೮

"ಅರರೇ ! ಕೊಯ್ದನು
ಕೊರಲನು ಕಪಟದೆ
ಕರುಣಾಹೀನನು
ನರಪತಿಯೆನ್ನಾ ! ೧೯

"ಅಹಿವಿಷದಂತೀ–
ಕುಹಕವು, ಮಂಥರೆ,
ಅಹಿತವನೊದಗಿಸ–
ದಿಹುದೆ ಮಗನಿಗೆ ? ೨೦

"ಅಹಹಾ ! ಮೋಸವು
ದಹಿಸುವುದೆದೆಯನು !
ಇಹುದೆ ಉಪಾಯವು ?
ಸಹಿಸೆನುರಿಯನು ! ೨೧

"ಬಲೆಯಲಿ ಸಿಲ್ಕಿದೆ–
ನಲೆ ! ನಿರ್ಮಾಲ್ಯದ–
ವೊಲು ಜನ್ಮವು ನಿ–
ಷ್ಫಲವಾಯ್ತ್ತಕಟಾ ! ೨೨

"ಅಳಿದೆಸೆಯೆನಗ–
ಗ್ಗಳಿಕೆ ಸಪತ್ನಿಗೆ !
ಹಳಿಗೆನ್ನಯ ಹೆಸ–
ರೊಳಗಾಯ್ತಮ್ಮಾ ! ೨೩

"ಮಗನನು ಕಾಣುವ
ಬಗೆಯೀಕ್ಕೈಕೇ–
ಯಿಗೆ ತೋರದು ! ದು–
ರ್ಭಗೆ ನಾನಲ್ತೇ ? ೨೪

“ಇನ್ನಿ ಹರಾರೆನ-
ಗೆನ್ನವರೆಂಬರು ?
ಎನ್ನನು ಕಾಯ್ವರು
ಬನ್ನದೊಳಾರು ? ೨೫

“ತೋರಿಸು, ಮಂಥರೆ,
ದಾರಿಯುನೆನಗಿ-
ನ್ನಾರಿಹರೌ ಗತಿ
ಬೇರೆನಗಿಲ್ಲಿ ?” ೨೬

ಮಿಡುಕುತೆ ಕಂಬನಿ-
ಮಿಡಿಯುತೆ ಕೇಕಯಿ
ನುಡಿಯೆ, ವಿಷೋದರಿ
ನುಡಿದಳು ಕುಬ್ಜೆ ೨೭

“ಹೆದರದಿರಿದಕಿರು-
ವುದು ಮಾರ್ಗವು, ಮೋ-
ಸದೆ ಬಲೆಯನು ಹರ-
ಪಿದನೌ ನೃಪತಿ ! ೨೮

“ಮನವಿರೆ, ಮಾರ್ಗವು
ಸನಿಹದಲಿರುವುದು;
ನೆನೆ, ಕೇಕಯಿ, ಹಿಂ-
ದಿನ ವೃತ್ತವನು ೨೯

‘‘ಕರೆಯೆ ಸುರರು, ನಿ-
ನ್ನರಸನು ಹೋದನು
ಸುರಲೋಕಕೆ ದನು-
ಜರನು ಮುರಿಯಲು  ೩೦

‘‘ಧರಣೀಪತಿ ದೈ-
ತ್ಯರನಿದಿರಿಸಿ ಸಂ-
ಗರದಲಿ ಮೆರೆದನು
ತರಿದಿಕ್ಕುತಲಿ  ೩೧

‘‘ಅಸಮಧೃತಿಯ ಸಾ-
ಹಸವನು ನೀನೀ-
ಕ್ಷಿಸುತಿದ್ದೈ ಸಂ-
ತಸದೆ ಬಳಿಯಲಿ  ೩೨

‘‘ಅರಿಗಳ ಕೆಯ್ದುಗ-
ಳಿರಿತಕೆ ಮೆಯ್ ಬಿರಿ-
ತಿರಲಾತನನುಪ-
ಚರಿಸಿದೆ, ಪೊರೆದೆ  ೩೩

‘‘ಮನವೊಸೆದೆಂದನು,
‘ನಿನಗೆ ವರದ್ವಯ-
ವನು, ಕೇಕಯಿ, ಕೊಡು-
ವನು ನಾನೆ’ಂದು  ೩೪

''ಸುರುಚಿರವಚನದೆ
ನರಪತಿಗಿಂತು–
ತ್ತರವನು ನೀನಾ–
ದರದಿಂದಿತ್ತೈ ೩೫

'' 'ಉಳಿದಿರಲೀವರ–
ಗಳು ನಿನ್ನಲ್ಲಿಯೆ,
ಬಳಸೆನು ನಾನೀ–
ಗಳೆ, ಭೂಪಾಲಾ' ೩೬

''ಅಂದಾತೆರದಿಂ–
ದೆಂದುದೆ ಬಳ್ಳಿದ–
ನಿಂದೊದಗಿಸುವುದು,
ಸಂದೆಯವಿಲ್ಲಾ ೩೭

''ಭರತನಿಗೈಸಿರಿ
ಬರುವುದು, ಮತ್ತದು
ಸ್ಥಿರವಹುದೀವರ–
ವೆರಡರ ಬಲದೆ ೩೮

''ಬರಲಿಂದೀವಂ–
ದಿರಕರಸನನು, ಮುಳಿ–
ದಿರು, ನುಡಿಯಿಸೆ, ಬಾ–
ಯ್ದೆರೆಯಲುಬೇಡಾ ೩೯

‘‘ಕಿವಿಗುಡಬೇಡೌ
ಅವನಿಪನಾಡುವ
ಸವಿಮಾತಿಗೆ, ನಿ–
ರ್ದ್ರವೆಯಾಗಿಹುದೌ ! ೪೦

‘‘ಹೃದಯದೊಳೇನಿರು–
ವುದು ನುಡಿ, ಸಲಿಸುವೆ–
ನದನೆಂದೊಡೆ ನುಡಿ–
ವುದು ನೀನಿಂತು ೪೧

‘‘ ‘ಸ್ಮರಣೆಯುಲಿರುವುದೆ
ವರಗಳನಿತ್ತುದು,
ನರಪತಿ, ದೇವಾ–
ಸುರಯುದ್ಧದಲಿ ? ೪೨

‘‘ಉಳಿದಿಹುವಾವರ–
ಗಳು, ನಲ್ಲನೆ, ನಿ–
ನ್ನೊಳು, ಬೇಡುವೆನೀ–
ಗಳೆ ನಾನವನು ೪೩

‘‘ಇನವಂಶಲಲಾ–
ಮನೆ, ಪಾಲಿಸು ನುಡಿ–
ಯನು, ಸತ್ಯಪ್ರಾ–
ಣನೆ, ಭೂಪಾಲಾ ! ೪೪

"ವರವೊಂದೆನ್ನಯ
ಭರತನಿಗೀಗಳೆ
ತರಲೀರಾಜ್ಯದ
ಸಿರಿಯೆಲ್ಲವನು ! ೪೫

"ವರವಿದು ಮತ್ತೊಂ-
ದಿರದೊಡಪೂರ್ಣವು;
ಸ್ಥಿರವಲ್ಲದ ಸಿರಿ-
ಸಿರಿಯೆಂತಹುದು ? ೪೬

"ಮನೆಯಲಿರದೆ ರಾ-
ಮನು, ನೃಪ, ಕಳೆಯಲಿ
ವನದಲಿ ವರುಷಗ-
ಳನು ಹದಿನಾಲ್ಕು !' ೪೭

"ಎದೆಗಿಡದಿಂತವ-
ನಿದಿರಲಿ ನುಡಿ ನೀ-
ನೊದಗುವುದಾ ಸಂ-
ಪದವು ಮಗನಿಗೆ ೪೮

"ಚತುರತೆಯಿಂದೀ-
ಪ್ಸಿತವನು ಸಾಧಿಸು,
ಹಿತವನು, ಕೇಕಯಿ,
ಸುತನಿಗೊದಗಿಸು" ೪೯

ಅದು ನೀರೊಳು ಕೆಸ-
ರದು ಹಾಲೊಳು ಹುಳಿ
ಅದು ಮಂಥರೆಯಾ-
ಡಿದ ಕೀಳುನುಡಿ ! ೫೧

ಇದು ತೃತೀಯಾಧ್ಯಾಯವು

ಶ್ರೀಃ

# ಚತುರ್ಥಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಮನುಜನ ಮನವೇ-
ನನೊ ಬಯಸುವುದೇ-
ನನೊ ಗೆಯ್ವುದು ವಿಧಿ !
ಎನಿತು ವಿಷಮವೋ ! ೨

ಅಸಮಯಶಸನಾ-
ವಸುಧಾಧಿಪನನು
ವ್ಯಸನಕೆ ಗುರಿಯಾ-
ಗಿಸಿದವಳಬಲೆ ! ೩

ಸಾಕೇತಾಧಿಪ-
ನೇಕೈತಂದನೊ
ಕೈಕೇಯಿಯ ಗೃಹ-
ಕಾಕಾಲದಲಿ ? ೪

ಏನನೊ ನೋಡಿದ-
ನಾನರನಾಥನು;
ಮೌನವೆ ತುಂಬಿಹು-
ದಾನಿಲಯದಲಿ ೫

ಹೊರಗನಿತುತ್ಸವ-
ವಿರಲೊಳಗೆಲ್ಲಿಯು
ವಿರಸತೆಯೆದೆಯನೆ
ಬಿರಿಯಿಸುವುದಲೇ ! ೬

ಬರಿನೆಲದಲಿ ಮಲ-
ಗಿರುವಳು ಕೇಕಯಿ,
ತೊರೆದೊಗೆದಿಹಳಾ-
ಭರಣವನವಳು ೭

ಕೆದರಿದ ಕೂದಲ
ಹೊದಿಕೆಯೊಳಡಗಿರು-
ವುದು ಲಲಿತಾಂಗಿಯ
ವದನಾಂಬುಜವು ೮

ಕೆರಳಿದ ಹಾವಿನ
ತೆರದಿಂದೆಡೆವಿಡ-
ದುರಿಯುರಿಯುತೆ ಫೂ-
ತ್ಕರಿಸುತಲಿಹಳು ೯

ಪರಿಚಾರಿಕೆಯರ-
ನಿರಲೀಯಳು ಭೀ-
ಕರದರ್ಶನೆ ನಿ-
ಷ್ಠುರೆ ನೆರೆಯಲ್ಲಿ ! ೧೦

ಪ್ರಿಯವನು ಸವಿಯಲು
ಬಯಸಿದ ನೃಪನ-
ಪ್ರಿಯವನು ಕಾಣುತೆ
ಭಯವೈದಿದನು ೧೧

ಪಾಪೆಗೆ ನುಡಿದನ-
ಪಾಪನು ಭೂಪತಿ,
"ಕೋಪವು ನಿನಗೇ-
ಕೀಪರಿಯೊಳಿದು ? ೧೨

"ಮಾನಿನಿ, ನಿನಗಸ-
ಮಾನವನೆಸಗಿದ-
ರೇನಾರಾದರು
ಹೀನಮನುಜರು ? ೧೩

"ಇದು ಸಮಯವು ಸ-
ಮ್ಮುದಕಿರುತಿರಲಿಂ-
ತಿದು ದುರ್ಮನವೇ-
ಕಿದು ಮುಳಿಸೇಕೆ ? ೧೪

"ವನಿತಾಮಣಿ, ನಾ-
ಳಿನ ದಿನವದು ರಾ-
ಮನಿಗಭಿಷೇಕದ
ದಿನವೆಂದರಿಯೌ ೧೫

"ಇಂತುತ್ಸವದಲಿ
ಸಂತಸಗೆಟ್ಟೀ-
ಕಾಂತದಲಿರುವುದ-
ಕೆಂತಾಯ್ತು ಮತಿ ? ೧೬

"ಅನುಚಿತವು, ಮನ-
ಸ್ವಿನಿ, ಮಂಗಲದಲಿ
ಮುನಿಸೆಂಬುದು; ಮುದ-
ವನು ತಳೆ, ದೇವೀ ! ೧೭

"ಕಡಲುಡಿಗೆಯ ನೆಲ-
ದೊಡೆತನವೆಮ್ಮದು,
ನುಡಿ ನಿನ್ನಿಷ್ಟವ-
ನಿಡುವೆವು ತಂದು ೧೮

"ಬಿಡು ಮುಳಿಸನು ನೀ-
ನೆಡೆಗುಡು ಸಲ್ಮೆಗೆ;
ನುಡಿ, ಕೇಕಯಿ, ನಲ್-
ನುಡಿಗಳನಿನ್ನು ೧೯

“ಮನದಲ್ಲಿದ್ದುದ–
ನೆನಗೊರೆಯದೊಡೆಂ–
ತಿನಿಯಳೆ, ಹೇಳರಿ--
ವೆನು ನಾನದನು ?” ೨೦

ಹೃದಯವು ದಯೆದೋ–
ರದು ದಶರಥನಾ–
ಡಿದ ಮಾತಿಗೆ ಕರ–
ಗದು ಕೇಕಯಿಯಾ ! ೨೧

ನಿಡುಸುಯ್ವಳು, ಕಿವಿ–
ಗುಡಳವನೀಶನ
ನುಡಿಗಳಿಗೇನನು
ನುಡಿಯಳು ವಾಮೆ ೨೨

ಧರಣೀಪತಿ ತ–
ನ್ನರಸಿಗೆ ದೀನ–
ಸ್ವರದಲಿ ನುಡಿದನು
ಕರುಣಾಸ್ಪದನು ೨೩

“ಅಕಟಕಟಾ ! ಏ–
ತಕೆ ಚಿತ್ತವ್ಯಥೆ ?
ವಿಕೃತಿಯಿದೇತಕೆ ?
ಸುಕೃತಿನಿ, ಹೇಳು ೨೪

"ಮನದಲ್ಲಿದ್ದುದ-
ನನುಮಾನಿಸದಲೆ
ಎನಗುಸಿರೌ, ಮಾ-
ನಿನಿ, ಮನದನ್ನೆ ! ೨೫

"ಪ್ರಿಯೆ, ಹೇಳೌ, ಕೇ-
ಕಯಿ, ರಾಮನವೊಲು
ಪ್ರಿಯನೆನಗೆ ಜಗ-
ತ್ರಯದೊಳಗಾರು? ೨೬

"ಅವನಾಣೆ ನೃಪುಂ-
ಗವನಾಣೆಯಭೀ-
ಷ್ಟವನೀಗಳೆ ಸಲಿ-
ಸುವೆನೌ ನಿನ್ನಾ ೨೭

"ಇದು ಮೌನವು ನಿ-
ನ್ನದು, ಸುಂದರಿ, ಎ-
ನ್ನೆದೆಯನು ಕೊರೆಕೊರೆ-
ವುದು, ದಯೆದೋರು !" ೨೮

ಜನನಾಥನ ನುಡಿ-
ಯನು ಕೇಳಿದಳಂ-
ಗನೆ ನುಡಿದಳು ಕೈ-
ಯನು ಹಿಡಿಡಿಡಿತು ೨೯

“ಕ್ಷಿತಿಪತಿ, ಸತ್ಯ–
ವ್ರತ, ಭಾಷೆಯುಸ–
ಕ್ಷತವಾಗಿಡು ನಿ–
ಶ್ಚಿತಮತಿಯಿಂದೆ, ೩೦

“ಕುಶಲವು ಮೋಹಕೆ
ವಶನಾಗದೆ ಕುಲ–
ಯಶವನು ಕಾಯ್ವುದು,
ದಶರಥನೃಪತೀ ! ೩೧

“ಸ್ಮರಣೆಯಲಿರುವುದೆ
ವರಗಳನೊಲಿದಿ–
ತ್ತಿರುವುದು ದೇವಾ–
ಸುರಯುದ್ಧದಲಿ ? ೩೨

“ಉಳಿದಿಹುವಾವರ–
ಗಳು, ದೇವಾ, ನಿ–
ನ್ನೊಳು, ಬೇಡುವೆನೀ–
ಗಳೆ ನಾನವನು ೩೩

“ವರವೊಂದೆನ್ನಯ
ಭರತನಿಗೀಗಳೆ
ತರಲೀರಾಜ್ಯದ
ಸಿರಿಯೆಲ್ಲವನು ೩೪

“ವರವಿದು ಮತ್ತೊಂ-
ದಿರದೊಡಪೂರ್ಣವು;
ಸ್ಥಿರವಲ್ಲದ ಸಿರಿ
ಸಿರಿಯೆಂತಹುದು ?                ೩೫

“ಮನೆಯುಲಿರದೆ ರಾ-
ಮನು, ನೃಪ, ಕಳೆಯ-ಲಿ
ವನದಲಿ ವರುಷಗ-
ಳನು ಹದಿನಾಲ್ಕು”                ೩೬

ಬಳಿಕೆಂದಳು, “ವರ-
ಗಳನಿವನೀಯದೊ-
ಡಳಿವೆನು ನಾನೀ-
ಗಳೆ ನಂಜುಂಡು !’                ೩೭

ಅರರೇ ಸ್ವೈರಿಣಿ-
ಯುರಿವೆಂಕೆಯನೇ
ಇರಿಸಿದಳಲರೊಳು
ಕರುಣೆಯನುಳಿದು !                ೩೮

ಬಲವಳಿದನು ನೃಪ-
ತಿಲಕನು ಬಲೆಯೊಳು
ಸಿಲುಕಿದ ಸಿಂಹದ-
ವೊಲು ಬಗೆಗುಂದಿ                ೩೯

ಕೂರಲಗೆದೆಯೊಳು
ಸೇರುವ ತೆರದಲಿ
ಸೇರಿತು ವನಿತೆಯು
ದಾರುಣದ ನುಡಿ ೪೦

ಏರಿದ ದುಃಖದೆ
ಧೀರತೆಯಳಿದಿತು,
ಆರಿತು ನಾಲಗೆ,
ಬಾರದು ಮಾತು ! ೪೧

ಹಿರಿದಾವ್ಯಥೆ ! ನೆಲ–
ಕುರುಳಿದನದರಿಂ–
ದರಿವಳಿದಲ್ಲಿಯು
ಧರಣೀಶ್ವರನು ! ೪೨

ಮರುಗಳು ನಿರ್ಘೃಣೆ–
ಯರಸನ ದುರ್ದಶೆ–
ಗರರೇ ! ನೆಲೆ ಬ–
ತ್ತಿರುವುದು ದಯೆಯಾ ! ೪೩

ಜನಪತಿಯೆಚ್ಚ–
ತ್ತನು, ಕೈಕೇಯಿಗೆ
ಮುನಿದೆಂದನು ಬಿರು–
ಪನಿಯಿಂದಿಂತು ೪೪

“ ಎಲೆ ಕುತ್ಸಿತೆ, ರಘು-
ಕುಲಘಾತಿನಿ, ದು-
ಶ್ಚಲೆ, ತಪ್ಪೇನೆ-
ನ್ನಲಿ ರಾಮನಲಿ ? ೪೫

“ವಿನಯಿ ನಿರಾಗಸ-
ನನುಪಮಗುಣಿ ರಾ-
ಮನು; ನಾನವನನು
ವನಕಟ್ಟುವುದೇ ? ೪೬

“ಪಿತೃದೇವನಿಗ-
ಕ್ಷತಶೀಲನಿಗ-
ಪ್ರತಿಮನಿಗೇಕೌ
ಸ್ಥಿತಿ ವನದೊಳಗೆ ? ೪೭

“ಬದುಕಲು ಜಗವಾ-
ರದು ರವಿಯಿರದಿರೆ,
ಬದುಕೆನು ರಘುಪತಿ-
ಯಿದಿರೊಳಿರದಿರೆ ! ೪೮

“ ನೀರನು ತೊರೆದಿರ-
ಲಾರದು ಮೀನಿರ-
ಲಾರೆನೆಲೌ ರಘು-
ವೀರನನುಳಿದು ! ೪೯

"ಕೊರಲಲಿ ನಲವಿಂ-
ದಿರಿಸಿದ ಹೂವಿನ
ಸರವೇಕಿಂತೆನ-
ಗುರುಲಾಯ್ತು ಕಟಾ! ೫೦

"ಹೂವಿನೊಳಡಗಿದ
ಹಾವಿನ ದಂಶದೆ
ಸಾವಾದೆವಲೇ
ಸಾವಿಗೆ ತುತ್ತು! ೫೧

"ಬದುಕಿಸು ನನ್ನನು,
ಬದುಕಿಸು, ಕೇಕಯಿ,
ಬದುಕಿಸು ಪತಿಯನು
ಬದುಕಿಸು, ದೇವೀ!" ೫೨

ಒರಲಿದನೊರಲಿದ-
ನರಸನು! ಕೇಕಯಿ
ಕರಗಳು, ಛಲವನು
ತೊರೆಯಳು ಮನದಾ! ೫೩

ಶ್ರೀಃ

## ಪಂಚಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಮೃದುವಲ್ತೇ ಸ್ತ್ರೀ-
ಹೃದಯವು? ಕೇಕಯಿ,
ಎದೆ ನಿನ್ನದು ಕ-
ಲ್ಲಿದೆಯೆಂತಾಯ್ತು ? ೨

ಈಮನುಜನಿಗಾ-
ರಾಮನನೀವಳು
ಸ್ತ್ರೀ ಮಾರ್ದವವನು
ಕೋಮಲತೆಯನು ೩

ಸರಸತಿ ಜಗಕೊದ-
ವಿರುವುದು ವನಿತೆಯ-
ರರವಿಂದವರಿಂ-
ದಿರವಿಗೆ ಚೆಲುವು ! ೪

ಮುಸುಕದೆ ಮನೆಯನು
ಮಸುಕೆಲ್ಲೆಲ್ಲಿಯು
ಹಸಿಯಾರಲು ಹೆಂ-
ಗುಸಿನ ಹೃದಯದಾ ? ೫

ಮರೆತೆಯೆ, ಕೇಕಯಿ,
ಭರತನವೊಲು ರಘು-
ವರನೊಲುವೆಯ ಮಗ-
ನಿರುತಿರುವುದನು ? ೬

ಅರಿಯದಿಹೆಯೆ ರಘು-
ವರನ ವಿವಾಸದೆ
ಮರಣಕೆ ನಿಜಪತಿ
ಗುರಿಯಹನೆಂದು ? ೭

ಇರುತಿಹನೇ ಇತ-
ರರವೊಲು ತಮ್ಮನು
ಭರತನು ? ಛಲವನು
ತೊರೆ, ಕೈಕೇಯೀ ! ೮

ಅದು ಬರುಗೆಂಡವೊ
ಅದು ಬರಸಿಡಿಲೋ
ಅದು ಕೇಕಯಿಯಾ-
ಡಿದ ಬಿರುನುಡಿಯೋ ! ೯

“ಜನಪತಿ, ಬೇಡಿದು-
ದನು ನಿಶ್ಚಯದೀ-
ವೆನು ನಿನಗೆಂದಿಂ-
ತೆಸುವುದೆ ನೀನು ? ೧೦

“ಇದು ಕಪಟಿಯ ನುಡಿ !
ಇದು ಕೀಳನ ನುಡಿ !
ಇದು ಸತ್ಯವ್ರತ-
ಸದು ನುಡಿಯಲ್ಲ ! ೧೧

“ಆಹಹಾ ! ವಶನಾ-
ಗಿಹೆ ಮೋಹಕೆ; ತಳೆ-
ದಿಹೆ ನೀನೆದೆಯಲಿ
ಕುಹಕವನೆಂತು ? ೧೨

“ತುಳಿಯಲು, ನೃಪ, ಕಾ-
ಲ್ಕೆಳಗಾಡಿದ ನುಡಿ-
ಗಳನೀತೆರದಿಂ-
ದೆಳಸುವುದುಂಟೇ ? ೧೩

“ಅನೃತದೆ ಜೀವಿಸು-
ವನು ರಘುಕುಲಜಾ-
ತನು ದಶರಥನೆಂ-
ದೆನರೇ ಜನರು ? ೧೪

"ಇದು ಕಪಟದ, ಪಾ–
ಪದ ಮನೆ ನಿನ್ನದು !
ಅದರಲಿ ಕೊಳೆಯುತೆ
ಬದುಕಿರಲೆಂತು ? ೧೫

" ಕೆರೆಬಾವಿಗಳಾ-
ಸರವನು ನಾನಿ–
ಸ್ನರಸುವೆನೆಸಗಾ–
ವರಗಳಿರದಿರೆ ! ೧೬

"ವನವಾಸವು ರಾ–
ಮನಿಗಾಗಲಿ ! ಭರ–
ತನಿಗೀರಾಜ್ಯವು,
ಜನಪನೆ, ಬರಲಿ !" ೧೭

ಮಡದಿಯು ನುಡಿಯುದು
ಸಿಡಿಲಂತಾಗಲು,
ನಡುಗಿದನರಸನು
ಕಡುದುಗುಡದಲಿ ೧೮

ಕೊರಗುತೆ ಮಮ್ಮಲ
ಮರುಗುತೆ ಬಿದ್ದನು !
ಸರಿದುದು ಚಿಂತೆಯೊ–
ಳಿರುಳಿಂತವನಾ ! ೧೯

ನಸುಕಾದುದು, ಮನ–
ಪೊಸೆದೆಲ್ಲಿಯು ಜನ–
ರೊಸಗೆಯೊಳಿರೆ, ಶೋ–
ಭಿಸಿದುದಯೋಧ್ಯೆ                    ೨೦

ಅರಮನೆಗೈತಂ–
ದರು ಮುದದೆ ವಸಿ–
ಷ್ಠರು ಮಂಗಲವನು
ನೆರವೇರಿಸಲು                    ೨೧

ಮುನಿ ಕರೆದು ಸುಮಂ–
ತ್ರನನೆಂದರು, "ಜನ–
ಪನಿಗರುಹೈ ಬರ–
ವನು ನೀನೆನ್ನಾ"                    ೨೨

ತ್ವರೆಯಿಂದಾತನು
ಗುರುಗಳ ಬರವನು
ಅರುಹಲು ಬಂದನು
ನರಪತಿಯೆಡೆಗೆ                    ೨೩

ಅಕಟಾ ! ಶುಭಕಪ–
ಶಕುನವೆ ? ನಿನ್ನಿನ
ವಿಕಸಿತಹೃದಯಕೆ
ವಿಕಲತೆಯಿಂದು !                    ೨೪

ಅವನೀಪತಿಯುಂ –
ತ್ಸವಸಮಯದಲಿಂ–
ತವಸನ್ನನದೆಂ–
ತವಸು ತಿಳಿಯನು ೨೫

“ಎಂತಡಗಿತು ಭೂ–
ಕಾಂತನ ಹೃದಯದ
ಸಂತಸವಕಟಾ !
ಚಿಂತೆಯಿದೇಕೆ ? ೨೬

“ವದನವು ಸೂಚಿಸು–
ವುದು ವೇದನೆಯಾ–
ವುದೊ ಇವನೆದೆಯೊಳು
ಕುದಿಕುದಿವುದನು ! ೨೭

“ಸತಿ ನೀನೌ ! ಉ–
ಗ್ರತೆಯೇಕಿದು ನಿಜ–
ಪತಿಯೊಳು ? ನಿನಗೀ–
ಚ್ಯುತಿಯನುಚಿತವು ೨೮

“ಕರುಣಾಸ್ಪದವಾ–
ಗಿರಲು ಪತಿಯು ದೆಸೆ,
ಮರುಕೆಂತೌ ನಿನ–
ಗಿರದಕಟಕಟಾ !” ೨೯

ಎಸುತಿಂತು ಸುಮಂ–
ತ್ರನು ಮನದಲಿ ಜನ–
ಪನ ಹೊರೆಗೈತಂ–
ದನು ಚಿಂತೆಯಲಿ ೩೦

ರಚಿತಾಂಜಲಿಯಾ–
ಸಚಿವನು ನುಡಿದನು
ಉಚಿತಜ್ಞನು ಮೃದು–
ವಚನಗಳಿಂದೆ ೩೧

"ಧರಣೀಪತಿ, ಕುಲ–
ಗುರು ಬಂದಿರುವರು,
ಬರವನವರು ನಿಮ–
ಗರುಹೆಂದಿಹರು" ೩೨

ಮರುಮಾತನು ಕುಡ–
ಲರಿಯದೆ ದಶರಥ–
ನಿರೆ, ಕೇಕಯಿಯೀ–
ತೆರದೆ ನುಡಿದಳು ೩೩

"ಇರುಳೆಲ್ಲವು ಎ–
ಚ್ಚರು ನೃಪತಿಗೆ, ರಘು–
ವರನಿಗೆ ಬಾರೆಂ–
ದರುಹು, ಸುಮಂತ್ರಾ ೩೪

“ಈನೃಪನೆಳಸುವ–
ನೇನನೂ ಹೇಳಲು,
ನೀನೀಗಳೆ ಕರೆ
ಮಾನಸಿಧಿಯನು ೩೫

ಮನಲೆಂದನದೇ–
ನನೂ ನೆನೆಯುತೆ ಸಚಿ–
ವನು, “ನೃಪನಾಣತಿ–
ಯೆನಗಿಹುದಿದುವೇ ?” ೩೬

“ಅಹುದು, ಸುಮಂತ್ರಾ,
ಅಹುದಹುದು, ಜಗತ್–
ಸುಹೃದನನೀಗಳೆ
ತಹುದೈ ನೀನು” ೩೭

ಒಡೆಯನ ನುಡಿಗೇ–
ಳ್ಗೊಡನೆ ಸುಮಂತ್ರನು
ನಡೆದನು ರಘುವರ–
ನೆಡೆಗುತ್ಸುಕನು ೩೮

**ಇದು ಪಂಚಮಾಧ್ಯಾಯವು**

ಶ್ರೀಃ

## ಷಷ್ಠಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಆದು ಶಾಂತಿಯ ತವ-
ರದು ರಘುವೀರನ
ಸದನವು ಮಾಂಗ-
ಲ್ಯದ ನೆಲೆವೀಡು ೨

ಬಿನದದ ಮನೆ, ಚೆಲು-
ವಿನ ಮನೆ, ನಲವಿನ
ಮನೆಯೊಲುಮೆಯ ಮನೆ,
ಮನೆ ಜಾನಕಿಯಾ ೩

ಇನಿಯಳು ರಘುನಾ-
ಥನಿಗಾತನ ಜೀ-
ವನದ ಕುಸುಮಕವ-
ಳಿನಿಗಂಪಲ್ತೇ ! ೪

ಪ್ರೇಮದ ಬೆಳಕವ–
ಳೀಮಂದಿರದೊಳು
ರಾಮನ ಹೃದಯ–
ಸ್ವಾಮಿನಿ ಸೀತೆ ೫

ಮೃದುಸರಸಾಲಾ–
ಪದ ಸವಿಯಲ್ಲಿಯ–
ದದು ಸಂಯಮದಿಂ–
ದೊದವಿದುದಲ್ತೇ ? ೬

ಶ್ರೀರಾಮನ ಸಂ–
ಸಾರದ ಮಧುರಗ–
ಭೀರತೆಯಂದವ–
ದಾರನೊಲಿಸದು ? ೭

ಸದನದೊಳೆಲ್ಲರ
ವದನದೊಳೆಸೆವುದು
ಮೃದುಮಧುರಸುಹಾ–
ಸದ ನಲ್ಬೆಳಗು ೮

ಉಲ್ಲಸದಿಂದಿರ–
ಲೆಲ್ಲರು, ಬಂದನು
ಅಲ್ಲಿ ಸುಮಂತ್ರನು
ಮೆಲ್ಲಡಿಯಿಡುತೆ ೯

ವಿನಯದೆ ನುಡಿದನು,
"ಜನಪತಿ ಕರೆದಿರು–
ವನು ನಿನ್ನನು, ಬೇ–
ಗನೆ ಬಾ, ರಾಮಾ !" ೧೦

ಎಂದುದನಾರಘು–
ನಂದನನಾಲಿಸಿ
ಬಂದನು ಭರದಲಿ
ತಂದೆಯ ಮನೆಗೆ ೧೧

ಎರಗಿದನತ್ಯಾ–
ದರದಲಿ ತಂದೆಯ
ಚರಣಕೆ ತಾಯಿಯ
ಚರಣಕ್ಕವನು ೧೨

ತಂದೆಯ ವದನವು
ಕಂದಿರೆ, ಕಂಡಿಂ–
ತೆಂದನು ರಘುಪತಿ
ನೊಂದು ಮನದಲಿ ೧೩

"ಹೃದಯವ್ಯಥೆಯನು
ವದನವು ಸೂಚಿಸು–
ವುದು, ನಿಮಗೇಕೊದ–
ವಿದುದಿದು, ತಂದೇ ?" ೧೪

“ಇರೆ ಮಕ್ಕಳು ನಾ-
ಲ್ವರು, ದುಗುಡಕ್ಕೆಡೆ-
ಯಿರುವುದಿದೊಂದ-
ಚ್ಚರಿಯಲ್ತೇನು ? ೧೫

“ಹೇ ರಾಜನೆ, ನಿನ-
ಗಾರಪರಾಧದೆ
ತೋರಿದುದೀವ್ಯಥೆ,
ಧೀರೋದಾತ್ತಾ ? ೧೬

“ಧರಣೀಶ್ವರ ನಿ-
ನ್ನರಳಿದ ಮೊಗವನೆ
ಅರಿತಿಹೆನೈ, ಇದು
ಕೊರೆವುದೆದೆಯನು ! ೧೭

“ನುಡಿಯಲು ಬಯಸುವೆ,
ನುಡಿಯದು ನಾಲಗೆ !
ಎಡರಾವುದು ? ತುಟಿ
ನಡುಗುವುದೇಕೆ ? ೧೮

“ಏಕೌ ನುಡಿಯನು
ಭೂಕಾಂತನು ಬಹು-
ಶೋಕಾಕ್ರಾಂತನು,
ಕೇಕಯಿ, ತಾಯೇ ? ೧೯

ಎಡೆಗುಡದೆದೆಯಲಿ
ಮಿಡುಕಿಗೆ ಕೇಕಯಿ
ನುಡಿದಳು ರಾಮನ
ನುಡಿಯನು ಕೇಳ್ದು ೨೦

"ಪ್ರಿಯನಹೆ, ನಿನಗ-
ಪ್ರಿಯವನು ನುಡಿಯಲು
ಭಯವಹುದೈ ನಿ-
ನ್ನಯ ಜನಕನಿಗೆ ! ೨೧

"ಅವನೀಶ್ವರನಿ-
ಷ್ಟವನರಿಯಲು ಬಯ-
ಸುವೆಯೈ, ಕುಡು, ರಾ-
ಘವ, ವಚನವನು ೨೨

"ಜನಕನು ಬಯಸುವು-
ದನು ನೆರವೇರಿಸ-
ಲನುಮಾನಿಸೆನೆಂ-
ದೆನುವುದು, ರಾಮಾ" ೨೩

"ಜನಕನ ಹೃದ್ಗತ-
ವನು ನೆರವೇರಿಸ-
ಲನುಮಾನವು ರಾ-
ಮನಿಗಿರಬಹುದೇ ? ೨೪

"ಸುತವತ್ಸಲನಹ
ಪಿತನಾಜ್ಞೆಯಸ–
ವ್ಮೃತನೆಂತಹುದೌ
ಪಿತೃದೇವನಿಗೆ ? ೨೫

"ಜನಪತಿಯಾಣತಿ–
ಯನು ತಲೆಯಲಿ ತಳೆ–
ವೆನು, ನೆರವೇರಿಸು–
ವೆನು ನಾನದನು ೨೬

"ಅವಿಚಲವೌ ರಾ–
ಘವರೆಂದುದು, ಸಂ–
ಭವಿಸದದಕೆ ಭಂ–
ಗವು ! ಹೇ ಮಾತೇ !" ೨೭

ಅವಿಕೃತನ ರಘು–
ಪ್ರವರನ ನುಡಿಗೇ–
ಳ್ದವಳು ನುಡಿದಳಿಂ–
ತವಿವೇಕಮತಿ ೨೮

"ಸುತಮೋಹದೆ ಪರಿ–
ವೃತನಾಗೀತನು
ಚ್ಯುತಸಹನು ಮಹೀ–
ಪತಿ, ನರರತ್ನಾ ! ೨೯

"ಸುರದಾನವಸಂ–
ಗರದಲಿ ಧರಣೀ–
ಶ್ವರನಿತ್ತನು ವರ–
ವೆರಡನು ನನಗೆ ೩೦

"ಉಳಿದಿಹುವಾವರ–
ಗಳು, ರಾಮಾ, ಅವ–
ನೊಳು; ಬೇಡಿದೆನೀ–
ಗಳು ನಾನವನು ೩೧

" 'ವರವೊಂದೆನ್ನಯ
ಭರತನಿಗೀಗಳೆ
ತರಲೀರಾಜ್ಯದ
ಸಿರಿಯೆಲ್ಲವನು ೩೨

" 'ವರವಿದು ಮತ್ತೊಂ–
ದಿರದೊಡಪೂರ್ಣವು;
ಸ್ಥಿರವಲ್ಲದ ಸಿರಿ
ಸಿರಿಯೆಂತಹುದು ? ೩೩

" 'ಮನೆಯುಲಿರದೆ ರಾ–
ಮನು, ನೃಪ, ಕಳೆಯಲಿ
ವನದಲಿ ವರುಷಗ–
ಳನು ಹದಿನಾಲ್ಕು' ೩೪

"ಮನದಲ್ಲಿದ್ದುದ–
ನೆಸಗುನಿರೌ, ಮಾ–
ನಿಸಿ, ಸಲಿಸುವೆನೆಂ–
ದನು ಭೂವರನು ೩೫

"ನುಡಿದೆನು ನಾನಾ–
ದೊಡೆ ಹಿಂಜರಿವನು,
ಮಿಡುಕವನನೃತ–
ಕ್ಕೆಡೆಗುಡಲಿರನು ! ೩೬

"ಅಕಟೀಭೂಪಾ–
ಲಕನ ಚರಿತದಿಂ–
ದಕುಟಿಲ ರಘುವಂ–
ಶಕೆ ದುರ್ಯಶವು ! ೩೭

"ಚ್ಯುತಿಯಿಂದಲಿ ನಿಜ–
ಪಿತನನು, ರಘುಸಂ–
ತತಿಯನು ಕಾಯು–
ಕ್ಷತಚಾರಿತ್ರಾ ! ೩೮

"ತೊಡು ವಲ್ಕಲವನು
ನಡೆಯುಡವಿಗೆ ನೀ–
ನೆಡೆಗುಡು ಭರತನಿ–
ಗೊಡನೆ, ನರವರಾ !" ೩೯

ಸುರಿಯಿಸಿದಳು ನಿ–
ಷ್ಠುರೆಯೆಣ್ಣೆಯನಾ–
ಧರಣೀಶ್ವರನೆದೆ–
ಯುರಿ ಭುಗಿಲೆನಲು ! ೪೨

ಸುಗಿದುರುಳಿದನವ–
ನಿಗೆ ಭೂರಮಣನು
ಮಗನನು ನಾನೆಂ–
ತಗಲಿರಲೆನುತೆ ! ೪೧

ಎರಗಿದನವರಿ–
ರ್ವರ ಚರಣಕೆ ರಘು–
ವರನು ನುಡಿದನಾ–
ದರದಿಂದಿಂತು ೪೪

"ಕರೆಯಿಸು, ತಾಯೇ,
ಭರತನನೀಗಳೆ;
ಹೊರಡುವೆನಡವಿಗೆ,
ಹರಸೌ, ತಾಯೇ !" ೪೫

ವಿನಯಾಂಬುಧಿಯಿಂ–
ತೆನುತಲಿ ಬಲವಂ–
ದನು ಮಸ್ತಕವಿ–
ಟ್ಟನು ಪಾದದಲಿ ೪೬

ಬಳಿಕಾರುಘುಕುಲ–
ತಿಲಕನು ಜನನಿಯು
ಬಳಿಗೈದಿದನವಿ–
ಕಲಮತಿ ಸುಮತಿ ೪೫

ಇದು ಷಷ್ಠಾಧ್ಯಾಯವು

ಶ್ರೀಃ

## ಸಪ್ತಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಆವಿಚಲನು ಯಶೋ-
ಧವಲನು ಜನನಿಯ
ಭವನಕೆ ಬಂದನು
ಸುವಿವೇಕನಿಧಿ ೨

ಅನುಸರಿಸಿದನಾ-
ತನನು ಸುಮಿತ್ರಾ-
ತನಯನು ಕುದಿಯುತೆ
ಮನದೊಳು ಮೌನಿ ೩

"ದಶರಥನೆಂತಪ-
ಯಶಕಾದನು ಗುರಿ
ವಶನಾಗೀಕ-
ರ್ಕಶಿ ಕೇಕಯಿಗೆ ? ೪

''ಎಲೆ ನಿನ್ನಿನ ಸಭೆ-
ಯಲಿ ನುಡಿದಾತೆರ-
ದಲಿ ಮಣ್ಣನು ಕ-
ಣ್ಣಲಿ ಚೆಲ್ಲಿದನು ! ೫

''ವಿಪಿನವಸತಿ ! ಜಗ-
ದಪಕಾರವನೇ
ನೃಪನೆಸಗಿದನಲೆ
ವಿಪರೀತಕೃತಿ ! ೬

''ಇದು ರಘುವಂಶಕೆ
ಸದೃಶವೆ ಅವನೆಸ-
ಗಿದ ಕೃತಿ ! ತಪ್ಪಾ-
ವುದು ರಾಮನಲಿ ? ೭

''ಭರತನಿಗಿರಲೈ-
ಸಿರಿಯೆಲ್ಲವು ರಘು-
ವರನೇಕೈ ವನ-
ಚರನಾಗುವುದು ? ೮

''ಭಯವೇ ಸತ್ಯಾ-
ಶ್ರಯನಿಂದೆ ? ಶುಭಾ-
ಶಯನಲ್ತೇ, ಕೇ-
ಕಯಿ, ರಾಘವನು ?'' ೯

ಮನದಲಿ ಲಕ್ಷ್ಮಣ-
ನೆನುತಿಂತುದ್ವಿ-
ಗ್ನನು ರಘುವೀರನ-
ನನುಸರಿಸಿದನು ೧೦

ಮಿನುಗುವುದದು ರಾ-
ಮನ ಮೆಲ್ನಗೆಯೋ,
ವಿನಯಾಂಬುಧಿಯೊಳ-
ಗಿನ ಬೆಳ್ನೊರೆಯೋ ? ೧೧

ಅದು ರಘುವೀರನ
ವದನದ ಸೊಬಗೋ,
ಅದು ಜನರಸುರಾ-
ಗದ ಪಡಿನೆಳಲೋ ! ೧೨

ಪರಮೋತ್ಸಾಹದ-
ಲಿರುತಿಹರಾಮಂ-
ದಿರದಲಿ ಜನರೆ-
ಲ್ಲರು ಮೆಯ್ಮರೆತು ೧೩

ಭಂಗುರವಬ್ಧಿತ-
ರಂಗದವೊಲು ಬಹಿ-
ರಂಗದ ಸಿರಿ, ನಿಃ-
ಸಂಗವೆ ಸುಖವು ೧೪

ಇದನರಿತಾಚರಿ-
ಸಿದನು ರಘೂತ್ತಮ-
ಸದರಿಂದಾತನ
ಹೃದಯದ ಶಾಂತಿ ೧೫

ವನದೊಳಗಿಹುದಾ-
ತನಿಗಾಯ್ತಂದಿಸ
ದಿನದಲಿ ತುಂಬಿದ
ಮನೆಯನು ತೊರೆದು ! ೧೬

ಎಂತಹುದೋ ಅವ-
ನಂತಃಕರಣವು !
ಭ್ರಾಂತಿಗೆ ವಶವೇ ?
ಚಿಂತೆಯೊದವಿತೇ ? ೧೭

ವಾರಿಧಿವೊಲು ಗಂ-
ಭೀರನು, ಗಿರಿವೊಲು
ಗೌರವಯುತನೈ
ಶ್ರೀರಾಘವನು ೧೮

ಲಲಿತಾಂಗನು ಮಂ-
ಗಳಮತಿ ನಡೆದನು
ನಲವೊದವಿಸುತಲಿ
ಕಲಮೃದುಭಾಷಿ ೧೯

ಮುದದಿಂದಲಿ ತುಂ–
ಬಿದು ದಾರಘುವರ–
ನೆದೆ ಜನನಿಯು ದೂ–
ರದ ದರ್ಶನದೆ ೨೦

ಎಲೆ ! ರಾಮನ ಕ–
ಣ್ಣಲಿ ನೀರೆಂತಿದು ?
ನಲವಳಿದುದು ಧೃತಿ–
ನಿಲಯನದೆಂತು ? ೨೧

ಅದಿರುತಲಿಹುದು ಸ–
ಹೃದಯನ ಕೆಳದುಟಿ !
ಉದುರಿತು ಕಣ್ಣಿಂ–
ದಿದೊ ಜಲಬಿಂದು ! ೨೨

ಜನನಿಯನಿಂದಿನ–
ದಿನದಲಿ ತೊಲಗಿಹು–
ದೆನಗಾಯ್ತೆಂದಾ–
ತನ ಮಿಡುಕಲ್ತೇ ? ೨೩

ಅನುಚಿತವೈ ಕಂ–
ಬನಿ ಕೌಸಲ್ಯೆಯು
ತನಯನಿಗೆನಗೆಂ–
ದೆನುತೆ ತೊಡೆದನು ೨೪

ತಳೆದನು ಮೊಗದ–
ಲ್ಲಿನಗೆಯನು ರಘು–
ತಿಲಕನು ಜನನಿಯ
ಬಳಿಗೈದಿದನು ೨೫

ನಿಂದನು ತಾಯನು
ವಂದಿಸಿ ನಯನಾ–
ನಂದನು ಮನದೊಲ–
ವಿಂದೆ ರಘುಪತಿ ೨೬

ಸರಸವಚೋಮೃತ–
ದೆರೆದಳು ಮಗನನು,
ಪರಮಾನಂದದೆ
ಹರಸಿದಳವಳು ೨೭

“ಇದು ನಿನಗಭ್ಯುದ–
ಯದ ದಿನವಾನಂ–
ದದ ದಿನವೆಮಗೈ
ಇದು, ರಘುನಾಥಾ ! ೨೮

“ತನಯನೆ, ಯುವರಾ–
ಜನು ನೀನಾಗುವೆ,
ಜನರಾರಾಧನೆ
ನಿನಗಿರಲಿ ಗುರಿ ೨೯

"ಸುತ, ನೆನೆ ಸತ್ಯ-
ವ್ರತದಿಂದಿಲ್ಲವು
ಚ್ಯುತಿಯೀರಘುಸಂ-
ತತಿಗೆಂಬುದನು ೩೦

"ನುತಚರಿತನೆ, ದ-
ಕ್ಷತೆಯುಳಿ ಪಾಲಿಸು
ಪಿತನಾಣತಿಯುನು
ಸತತವು ನೀನು ೩೧

"ಅರಿತಿರು ಧರ್ಮಾ-
ತ್ಮರ ಹಿರಿಯರ ನುಡಿ
ಕಿರಿಯರಿಗಪ್ಪುದು
ಹರಕೆಯು ಎಂದು" ೩೨

ಜನನಿ ನುಡಿದ ನುಡಿ-
ಯನು ಸರಶಾರ್ದೂ-
ಲನು ಕೇಳ್ದಿಂತೆಂ-
ದನು ಮಿತಭಾಷಿ ೩೩

"ಪತಿದೇವತೆ, ಸುತ-
ಹಿತತತ್ಪರೆ, ಸಂ-
ತತವೂ ನಿಮ್ಮಾ-
ಣತಿ ಶರಣೆನಗೆ ೩೪

“ಕರೆಯಿಸೆ ಬೆಳಗಿಸ-
ಲರಸನು, ತಿಳಿದೆನು
ಸಿರಿ ಭರತನಿಗೆಸ-
ಗಿರವು ವನದಲಿ ೩೫

“ಪುರದಲಿ ನಾನಿ-
ನ್ನಿರುವುದು ಪಾಪವು !
ಹೊರಡುವೆನೀಗಳೆ,
ಹರಸೌ, ತಾಯೇ !” ೩೬

ಅದು ರಾಮನ ವಿನ-
ಯದ ಮೆಲ್ನುಡಿಯುವ-
ಳೆದೆಯನು ಬಿರಿಯಿಸಿ-
ದುದು ಸರಳಂತೆ ! ೩೭

“ತನಯನೆ, ನಿಷ್ಪಾ-
ಪನು ನೀನಹೆ, ಜನ-
ಪನು ವಿಧಿಸಿದನೇ
ವನವಾಸವನು ? ೩೮

“ಅಕಟಾ ! ರಘುವಂ-
ಶಕೆ ತಂದುದು ವಿಧಿ
ವಿಕೃತಿಯನೇಕೋ
ಸುಕೃತರ ಕುಲಕೆ ? ೩೯

"ಬರೆಯೆಳೆದನು ಭೂ-
ವರನೆನ್ನಂತ:-
ಕರಣಕರುಹಿ ವನ-
ದಿರವನು ನಿನಗೆ !" ೪೦

ಹಿರಿದಾಗಲು ಸುತ-
ವಿರಹದ ಭಯವವ-
ಳುರುಳಿದಳಿಳೆಗೆ-
ಚ್ಚರುದಪ್ಪಿದಳು ೪೧

ತ್ವರೆಯಿಂದೆದ್ದುಪ-
ಚರಿಸಿದರವರಿ-
ರ್ವರು, ಮೆಲ್ಲನೆ ಕ-
ಣ್ದೆರೆದಳು ಸಾಧ್ವಿ ೪೨

ಜನನಿಗೆ ರಘುನಾ-
ಥನು ಕೈಮುಗಿದೆಂ-
ದನು ಪದದೆಡೆಯಲಿ
ವಿನಯದೆ ನಿಂದು ೪೩

"ಮನದಳಲನು ಬಿಡು,
ಜನನೀ, ಕಳೆವೆನು
ವನದಲಿ ವರುಷಗ-
ಳನು ಹದಿನಾಲ್ಕು ೪೪

"ಅವಧಿ ಮುಗಿಯೆ, ತಿರು-
ಗುವೆನು ಮನೆಗೆ, ಕೊರ-
ಗುವುದನು ತೊರೆವುದು,
ಸುವಿಮಲಹೃದಯೇ ೪೫

"ತಡೆಯೆನು, ತಾಯೇ,
ನಡೆವೆನು, ನಾನಿ-
ನ್ನಡವಿಗೆ, ಹರಸೌ !
ಅಡಿಗೆರಗುವೆನು" ೪೬

ವ್ಯಾಕುಲಹೃದಯೆ ವಿ-
ವೇಕದೆ ತಡೆದಳು
ಶೋಕದ ವೇಗವ-
ನಾಕೌಸಲ್ಯೆ ೪೭

ಸುತನ ಮುಖವನಾ-
ಯತಲೋಚನೆ ನೋ-
ಡುತೆ ನುಡಿದಳು ಸು-
ವ್ರತೆಯಾತನಿಗೆ ೪೮

"ಮಂಗಲವಾಗಲಿ,
ತುಂಗಪರಾಕ್ರಮಿ,
ಮಂಗಲಚರಿತ, ಶು-
ಭಾಂಗನೆ, ನಿನಗೆ ೪೯

"ಅವಿರತವನುಸರಿ–
ಸುವ ಧರ್ಮವು, ರಾ–
ಘವ, ನಿನ್ನನು ಸತ–
ತವು ರಕ್ಷಿಸಲಿ ! ೫೧

"ಮುನಿ ವಿಶ್ವಾಮಿ–
ತ್ರನು ಕೊಟ್ಟಸ್ತ್ರಗ–
ಳನವರತವು ನಿ–
ನ್ನನು ರಕ್ಷಿಸಲಿ ! ೫೨

"ಪಿತೃಶುಶ್ರೂಷಾ–
ರತಿ ನಿನ್ನದು ಸಂ–
ತತವೂ, ಹೇರಘು–
ಪತಿ, ರಕ್ಷಿಸಲಿ !" ೫೩

ತನಯನನು ತಪ–
ಸ್ವಿನಿ ಮೆಯ್ದಡವಿಂ–
ತನುನಯದೆ ಮನ–
ಸ್ವಿನಿ ಹರಸಿದಳು ೫೪

ತಿಲಕವನಿರಿಸಿದ–
ಳೊಲವಿಂದಲಿ ರಘು–
ಕುಲತಿಲಕನ ಹಣೆ–
ಯಲಿ ಕೌಸಲ್ಯೆ ೫೫

ಸುಕೃತನು ನಡೆದನು
ಸುಕೃತೆಯು ಪದಕಮ-
ಲಕೆ ವಂದಿಸಿ ನಿಲ-
ಯಕೆ ಜಾನಕಿಯಾ ॥೫॥

ಇದು ಸಪ್ತಮಾಧ್ಯಾಯವು

ಶ್ರೀಃ

## ಅಷ್ಟಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಪತಿಸತಿಯೆಂಬೀ-
ದ್ವಿತಯದೆ ಜೀವದ
ಸ್ಥಿತಿಸುಖಗಳ ಸು-
ಸ್ಥಿತಿಯಹುದಹುದು ೨

ಮೊದಲೆರಡಿರುವಾ-
ಹೃದಯಗಳೊಂದ-
ಪ್ಪುದಕಿರುವುದದಾ-
ವುದು ಕಾರಣವು ? ೩

ಎರಡೊಂದಾಗಲು
ಸರಸವು ಜೀವವು !
ವಿರಸವದಹುದೊಂ-
ದೆರಡಾದೊಡನೆ ! ೪

ಇನಿದೈ ! ಬದುಕಿನಿ-
ದಿನಿದೈ ! ನಲ್ಮೆಯ
ನನೆಯಲರಲು, ಬದು-
ಕಿನಿದಿನಿದಿನಿದೈ ! ೫

ಮೃದುಭಾವಪರಾ-
ಗದೆ ನೊಂಪೆಸೆವುದು
ವದನವು ರಾಮನ
ಹೃದಯೇಶ್ವರಿಯಾ ೬

ತ್ವರೆಯಿಂದೆದ್ದಳು
ವರವರ್ಣಿನಿ ಮುಂ-
ದಿರದಲಿ ನಲ್ಲನ
ಬರವನು ಕಂಡು ೭

ಬಂದಿದಿರಲಿ ನಲ-
ವಿಂದಲಿ ನೋಡುತ-
ಲೆಂದಳು, "ಮೊಗವಿದು
ಕಂದಿಹುದೇಕೆ ? ೮

"ಎಳನಗೆಯಿಹುದದ-
ರೊಳು ಕಾಣೆನು ನಲ್-
ವೆಳಗನದೇಕೈ ?
ತಿಳಿಯಿಸು, ರಾಮಾ ! ೯

"ಮನದಾವುದೊ ನೋ-
ವನು ದೃಢನಿಶ್ಚಯ-
ವನು ತೋರ್ಪುವು ಲೋ-
ಚನಗಳು ನಿನ್ನಾ ೧೦

"ಇದು ನಿನ್ನಭಿಷೇ-
ಕದ ದಿನವಿರೆ, ಸ-
ನ್ಮುದಕೆ ಬಗೆಯೊಳಾ-
ಸ್ಪದವೆಂತಿರದು ? ೧೧

"ಎನಗಿದರೊಳು, ವೇ-
ದನೆಯೊಳು ನಿನ್ನನು,
ಮನದನ್ನಾ, ಪಾ-
ಲಿಸು ಬೇಡುವೆನು" ೧೨

ಸರಸಿಜವದನೆಯ
ನಿರಿಗುರುಳನು ನೇ-
ವರಿಸುತೆ ನುಡಿದನು
ಪುರುಷೋತ್ತಮನು ೧೩.

"ಬನ್ನವಿದುವೆ, ಮನ-
ದನ್ನಳೆ, ಜಾನಕಿ,
ನಿನ್ನನು ನಾನಗ-
ಲಿನ್ನಿರಬೇಕು ! ೧೪

"ಜನಪನು ವಿಧಿಸಿದ-
ನೆನಗಿಂದಿನ ಬೆಳ-
ಗಿನಲಿ, ಮನೋಹರೆ,
ವನವಾಸವನು ! ೧೫

"ಕ್ಷಿತಿಪತಿ ಸತ್ಯ-
ವ್ರತನು ಸುಹೃತ್ರ್ರಪು-
ಸತಿಕಾರುಣಿಕನು
ಸುತವತ್ಸಲನು ೧೬

"ಇದು ಸತ್ಯವ್ರತ-
ರದು ವಂಶವು ನ-
ಮ್ಮದು ರಾಘವರದು,
ಸದಮಲಹೃದಯೇ ೧೭

"ಸಿರಿಯನು ಸುತಸತಿ-
ಯರನಾಹುತಿಗೆ-
ಯ್ವರು ಸತ್ಯವ್ರತ-
ಪರಿಪಾಲನೆಗೆ ೧೮

"ಸುತನನು ಸತ್ಯ-
ವ್ರತಪರಿಪೂರ್ತಿಗೆ
ಪಿತನಗಲುವನೌ,
ಸತಿ ವೈದೇಹೀ ! ೧೯

“ತೊರೆವೆನು ಸಿರಿಯನು,
ತೆರಳುವೆನಡವಿಗೆ.
ಸಿರಿಯಿದು, ಜಾನಕಿ,
ಭರತನಿಗಿಹುದು” ೨೧

“ಎಂತಹ ಮಾತನು,
ಕಾಂತನೆ, ನುಡಿವೈ !
ಇಂತಗಲಲು ನೀ–
ನೆಂತಿಹನಿಲ್ಲಿ ? ೨೨

“ಅರಮನೆ ನೀನಿ–
ಲ್ಲಿರುವೆನಕೆನಗಿದು,
ಸೆರೆಮನೆ ನೀನಗ–
ಲಿರಲಿದು, ದೇವಾ ! ೨೩

“ಅಡವಿಯುಹುದೆ ನಿ–
ನ್ನಡಿಯಿರುವೆಡೆಯದು ?
ಸಡಗರದರಮನೆ–
ಯೆಡೆನಿನ್ನಡಿಯಾ ! ೨೪

“ಇಲ್ಲೆನ್ನನು ಬಿಸು–
ಟಲ್ಲಿರಲೆಳಸುವೆ !
ಕಲ್ಲೆದೆಯವನೈ,
ನಲ್ಲನೆ, ನೀನು ! ೨೫

"ಮನವಾಪದಿರೆ-
ನ್ನನು ಜತಲಿಲ್ಲಿಯೆ,
ನಿನಗೆಡರಾಗೆನು
ವನದೊಳು, ರಾಮಾ !     ೨೫

"ಬಿಸಿಲೆಂಪೆನೆನ್ನೆ,
ಕುಸಿಯೆನು ದಣಿವಿಗೆ,
ಹಸಿವೆಂದೆನೆನಾ
ಣಿಸು, ದಾಶರಥೀ !     ೨೬

"ನೀರನು ಬೇಡೆನು,
ತೋರೆನು ನೋವನು,
ಬೀರೆನು ಮಾತನು,
ಹೇ ರಘುವೀರಾ !     ೨೭

"ನಡೆಯುತಲಿರೆ ನಿ-
ನ್ನಡಿಗೆಡರಾಗುವ
ತೊಡರುಗಳನು ತೆಗೆ-
ದಪುವೆನು ಬದಿಗ     ೨೮

"ವನದಲಿ ಸುಮಗಳ-
ನನುದಿನವೂ ತರು-
ವೆನು, ಹೆಣೆವೆನು ಸರ-
ವನು ನಿನಗಾಸಿಯಾ !     ೨೯

"ಸುರುಚಿರಫಲಗಳ-
ನರಸುವೆನು ವನಾಂ-
ತರದಲಿ, ಹೃದಯೇ-
ಶ್ವರ, ನಿನಗಲ್ಲಿ ೩೦

"ಹೆದರೆನು ಕಾಂತಾ-
ರದಲಿರುವಾಶ್ವಾ-
ಪದಗಳಿಗಾನಂ-
ದದೆ ನಾನಿಹೆನು ೩೧

"ಆಗಲಿರಲೆಂತೈ
ಬಗೆವೆ, ದಯಿತ? ಕೈ-
ಯ್ಯುಗಿವೆನು, ಬೇಡುವೆ-
ನಗಲಿರಬೇಡಾ!" ೩೨

ವನಜಾಕ್ಷಿಯು ಕಂ-
ಬನಿಗಳನೊರಸುತೆ-
ಅನುಸಯದಿಂತೆಂ-
ದನು ರಾಘವನು ೩೩

"ವನವಾಸಕೆ ನಿ-
ನ್ನನು ಗುರಿಯಾಗಿಸ-
ಲೆನಗೆಂತೌ, ಪ್ರಿಯೆ
ಮನವಾಗುವುದು? ೩೪

" ಎಲೆ ಜಾನಕಿ, ಕೋ–
ಮಲೆ, ವನದಲ್ಲಿರ–
ಲೊಲವಾದುದು, ಮಂ–
ಗಲೆ ನಿನಗೇನೌ ? ೩೫

" ಸದೃಶವು ನೀನಾ–
ಡಿದುದೆಮ್ಮಿರ್ವರಿ–
ಗಿದರಿಂದೆನಗಾ–
ದುದು ಸಂತಸವು ೩೬

" ಮನೆಯೊಳು ಸಹಚರಿ–
ಯೆನಗಿರುವಂತೆಯೆ,
ಜನಕಜೆ, ಸಹಚರಿ
ವನದೊಳಗಾಗು ೩೭

" ನಡೆ ನೀನಿಂದೆ–
ನ್ನೊಡನೆ, ಮನೋಹರಿ,
ಅಡವಿಗೆ; ನೀನಹೆ
ಸಡಗರವೆನಗೆ !" ೩೮

ಕಿರುನಗೆ ಮೊಗದಾ–
ವರೆಯಲಿ ಮಿನುಗುತ–
ಲಿರೆ, ನುಡಿದಳು ರಘು–
ವರನಿಗೆ ಸುದತಿ ೩೯

“ ಇದು ನಲ್ಲನ ನುಡಿ-
ಯಿದು ರಾಮನ ನುಡಿ,
ಇದು ನುಡಿಯೆನ್ನಯ
ಹೃದಯೇಶ್ವರನಾ ! ೪೦

“ ಎಲೆ, ಎನಿತಚ್ಚರಿ –
ನಿಲಯುವಿದನ್ಯರ
ನಿಲಯುದವ್ೊೀಲೀ–
ಗಲೆ ತೋರುವುದು ! ೪೧

“ ನಲ್ಲನದಲ್ಲದ
ಬೆಲ್ಲವು ನೀರಸ–
ವಲ್ಲವೆ ಆತನ
ನಲ್ಲಳ ಬಾಯ್ಗೆ ? ೪೨

“ ಕರುಣಾಕರ, ತಡೆ,
ಗುರುಗಳ, ಹಿರಿಯರ
ಚರಣಕಮಲಗಳಿ–
ಗೆರಗಿ ಬರುವೆನು ” ೪೩

ಎನುತಿರಲಿಂತಾ–
ಜನಕಜೆ, ರಘುವೀ–
ರನಿಗೆರಗುತೆ ನುಡಿ–
ದನು ಸೌಮಿತ್ರಿ ೪೪

“ ಒಂದೆಡೆಯುಲ್ಲಾಸಿ-
ರೊಂದೆಡೆಯುಲ್ಲೊಡ-
ಲೆಂದಿದ್ದಿತು, ರಘು -
ನಂದನ, ಹೇಳ್ವೈ ೪೫

“ ಕರುಣಾಕರ, ನಾ-
ನಿರಲಾರೆನು, ಮಂ-
ದಿರದಲಿ, ನೀವಗ-
ಲಿರೆ ವಿಪಿನದಲಿ ೪೬

“ ಜನಕಜೆಗೆಂತಂ-
ತೆನಗಡವಿಗೆ ಬರ-
ಲನುಮತಿಯನು ಕುಡು
ಮನದೊಲವಿಂದೆ ” ೪೭

ಪ್ರೀತಿಯ ತಮ್ಮನ
ಮಾತಿಗೆ ರಘುಕುಲ-
ಕೇತುವಿನುತ್ತರ-
ವೀತೆರದಲ್ಲಿ ೪೮

“ಎನ್ನ ವಿಯೋಗದೆ
ಖಿನ್ನರು ಹಡೆದವ-
ರಿನ್ನಿಲ್ಲಿರುವುದೆ
ನಿನ್ನ ಕೆಲಸವು ೪೯

" ಅವರನು ಸೇವಿಸು-
ತವಿರತವೂ ಬಾ-
ಳುವುದದುವೇ ಶ್ರೇ-
ಯವು, ಸೌಮಿತ್ರೇ "          ೫೦

ಅದಕೆಂದನು ದುಃ-
ಖದೆ ಕಂಬನಿಗಳ-
ನುದುರಿಸುತಲಿ ವಿನ-
ಯದೆ ಲಕ್ಷ್ಮಣನು          ೫೧

" ಹಿರಿಯರ ಸೇವೆಗೆ
ಭರತನು, ನಿಪ್ಮಯು
ಪರಿಚರ್ಯೆಗೆ ನಾ-
ನಿರುವುದುಚಿತವು          ೫೨

" ಬಗೆದೊಡೆ, ಕೌಸ-
ಲ್ಯೆಗೆ ವೀರಪ್ರಸ-
ವೆಗೆ ಧೃತಿಯೊಳು ದೊರೆ
ಜಗದೊಳಗಾರು ?          ೫೩

" ಅವಳಿಹಳಾಧಾ-
ರವು ನನ್ನವ್ವೆಗೆ,
ಬವಣೆಯು ಭಯವಿರ-
ದವರಿಗೆ, ರಾಮಾ !"          ೫೪

ಅನುಜನು ನುಡಿದುದ–
ಕನುನಯದಿಂದೆಂ–
ದನು ನರಶಾರ್ದೂ–
ಲನು ಮೆಯ್ದುಡವಿ ೫೫

“ ಇಲ್ಲಿಯ ಸುಖಗಳ–
ನೊಲ್ಲದೆ ಬಯಸುವೆ–
ಯಲ್ಲವೆ, ಮಗು, ಪಸ–
ದಲ್ಲಿರುವುದಕೆ ? ೫೬

“ ಅನುಜನೆ, ನಿನ್ನದಿ–
ದೆನಿತ್ತೆ ಪ್ರೇಮವು !
ವನವಾದುದಲೇ
ನಿನಗೊಲವಿನದು ! ೫೭

“ ಮಗು, ಬಾರೈ ಅಡ–
ವಿಗೆ ನೀನೆನ್ನೊಡ–
ನಗಲಿರಲಾರೆನು,
ಸುಗುಣಾಭರಣಾ ! ೫೮

“ ತ್ವರೆಯುಲಿ, ಲಕ್ಷ್ಮಣ,
ಗುರುಗೃಹದಿಂದಲಿ
ತರುವುದು ಶಸ್ತ್ರನಿ–
ಕರವನು ನೀನು ” ೫೯

ಕೋಮಲ ಹೃದಯದ
ಭಾಮಿನಿಯೊಲಿದಳು
ಪ್ರೇಮನಿಲಯನಾ-
ರಾಮನ ನುಡಿಗೆ ೬೦

**ಇದು ಅಷ್ಟಮಾಧ್ಯಾಯವು**

ಶ್ರೀಃ

## ನವಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಮನದಲಿ ಗುರುಪದ-
ವನು ನೆನೆಯುತಲಾ-
ತನ ಭವನಕೆ ಬಂ-
ದನು ಲಕ್ಷ್ಮಣನು ೨

ವಂದಿಸುತಾದರ-
ದಿಂದಲಿ ಕುಲಗುರು-
ಗೆಂದನು, "ಹೊರಟಿಹೆ-
ನಿಂದು ವಿಪಿನಕೆ ೩

"ಬಂದಿಹೆನಾಯುಧ-
ವೃಂದವನುಯ್ಯಲಿ-
ಕೆಂದು, ಮುನಿಪ, ಕೃಪೆ-
ಯಿಂದೆ ಕುಡುವುದು" ೪

ಮುನಿಯಾಲಿಸಿ ನುಡಿ–
ದನು, 'ಶಸ್ತ್ರಾಸ್ತ್ರಗ–
ಳನು ನೀನುಯ್ಯುದೊ
ಧನುರಾಲಯವು' ೫

ಧನುರಾಲಯದಿಂ–
ದನುಪಮಶಸ್ತ್ರಗ–
ಳನು ತಂದನು ರಾ–
ಮನ ಬಳಿಗವನು ೬

ಹೊಳೆಹೊಳೆವಾಯುಧ–
ಗಳನಾತನು ತಂ–
ದಿಳಿಪಲದೆಲ್ಲಿಯು
ಬೆಳಕೇ ಬೆಳಕು ! ೭

ವಿಸಲತಾಪ್ರಭೆ ನಿ–
ರ್ಮಲಶೌರ್ಯದೆ ರಘು–
ಕುಲದಾಯುಧಸಂ–
ಕುಲಕಾದುದದು ೮

ಅಕಲಿತಮಹಿಮನು
ಭಕುತಿಯೊಲಾಯುಧ–
ನಿಕರಕೆ ರಘುನಾ–
ಯಕನೆರಗಿದನು ೯

ಅನಿತರೊಳ್ಶೈತಂ–
ದನು ಪಾವನದ–
ರ್ಶನನಲ್ಲಿ ಸುಯು–
ಜ್ಞನು ಗುರುಸುತನು ೧೦

ಆವಿದ್ಯಾಬ್ಧಿಗೆ
ಮೂವರು ಭಕ್ತಿಯು
ಭಾವದೆ ಮಣಿದರು
ದೇವೋಪಮರು ೧೧

ವಿನಯದೆ ರಘುಕುಲ–
ವನಧೀಂದು ಸುಯು–
ಜ್ಞನಿಗೆಂದನು ರಾ–
ಮನು ಕೆಯ್ಮುಗಿದು ೧೨

“ಪರಹಿತರತರನ–
ವರತವು ನೀವಿರು–
ವಿರಿ, ನಿಮಗೆನ್ನದು
ಸಿರಿಯರ್ಪಿತವು!” ೧೩

ಗುರುಪುತ್ರನಿಗೀ–
ತೆರದೆ ನುಡಿದು ರಘು–
ವರನೊಪ್ಪಿಸಿದನು
ಸಿರಿಯೆಲ್ಲವನು ೧೪

ನಡೆದರು ಬಳಿಕವ–
ರೊಡನೆಯೆ ದಶರಥ–
ನೆಡೆಗಡಿಯಲಿ ಸಿರಿ–
ಯೆಡರನು ತುಳಿದು ೧೫

"ಜನನವಿವರದರ–
ಮನೆಯೊಳು, ಸಂವ–
ರ್ಧನವರಮನೆಯೊಳು;
ವನವಿನ್ನಕಟಾ ! ೧೬

"ನೃಪನಾದೇಶದೆ
ವಿಪಿನಕೆ ನಡೆದನು
ನೃಪಸುತನೆಂಬುದು
ವಿಪರೀತವಲಾ !" ೧೭

ಎನುತಿಂತು ಸುಯು–
ಜ್ಞನು ನೋಡುತಲವ–
ರನು ನೊಂದನು ಕಂ–
ಬನಿಯುದುರಿಸುತೆ ೧೮

ನೆರೆದ ಜನರು ಮರು–
ಮರುಗಿದರಾಮೂ–
ವರು ಕಾಲ್ನಡೆಯಲಿ
ಬರುವುದ ಕಂಡು ೧೯

"ಅಹಹ ! ವನಕೆ ಹೊರ-
ಟಿಹನಲ್ತೆ ರಘೂ-
ದ್ವಹನಿವನು ಜಗ-
ನ್ಮಹಿತಚರಿತನು ! ೨೦

"ಸುಗುಣಾಶ್ರಯನನು
ಮಗನನದೆಂತಡ-
ವಿಗೆ ನೂಕಲು ನೃಪ-
ನಿಗೆ ಮನವಾಯ್ತೋ ? ೨೧

"ನೀತಿವಿಶಾರದ-
ನೀತನು ಸುಯಶೋ-
ದ್ಯೋತಿತದಿಶನಭಿ-
ಜಾತವಿನುತನು ೨೨

"ಸದಯನು ಸುವಿಮಲ-
ಹೃದಯನು ವಿದ್ಯಾ-
ವಿದನೈ ದುರ್ಮದ-
ಮದವಿಧ್ವಂಸಿ ೨೩

"ಇವನಿರುವೆಡೆ ಪುರ-
ವಿವನಿರದೆಡೆ ವಿಪಿ-
ನವು ! ಬೆಂಬತ್ತುವೆ-
ವಿವನನು ವನಕೆ ! ೨೪

“ಸಲಿಲಕ್ಷಯದಿಂ-
ದಲಿ ನಡುವೇಸಗೆ-
ಯಲಿ ಜಲಚರಗಳ-
ವೊಲು ಬಾಯ್ಬಿಡೆವು ! ೨೫

“ತೊರೆಪರು ಪೌರರು
ಪುರವನು, ಬಂದಿ-
ಲ್ಲಿರಲಿನ್ನು ವನೇ-
ಚರರು ಮೃಗಗಳು ೨೬

“ಇದು ಪಾಳ್ಕೆಲಪ-
ಪ್ಪುದು ಸಾಕೇತವು !
ಇದು ಕೇಕಯಿ ಬಯ-
ಸಿದ ಸಂಪದವು ! ೨೭

“ಅಕಟಕಟಾ ! ಜಾ-
ನಕಿಯೆಂತೀಕ್ಲೇ-
ಶಕೆ ಮೆಯ್ಯೀವಳೊ
ಸುಕುಮಾರತನು ? ೨೮

“ಭಯವೊದವಿಸಿ ನೃಪ-
ತಿಯ ಜೀವಿತಕೌ
ಆಯುಶಕೆ ಗುರಿ, ಕೇ-
ಕಯಿ, ನೀನಾದೆ !” ೨೯

ಜನರಿಂತೆನುತಿಹು-
ದನು ಕೇಳುತೆ ನಡೆ-
ದನು ನಿಶ್ಚಲಹೃದ-
ಯನು ರಘುವರನು ೩೦

ವಿನಯಾಂಬುಧಿ ರಾ-
ಘುನು ಬಲವಂದನು
ಜನನಿಯು ಮಂದಿರ-
ವನು ಮಾರ್ಗದಲಿ ೩೧

ಅರಮನೆಗೈತಂ-
ದರು, ನೃಪತಿಯು ಕಾ-
ಲ್ಗೆರಗಿದರಾಮಯೂ-
ವರು ಭಕ್ತಿಯಲಿ ೩೨

ಬರಸೆಳೆದವರೆ-
ಲ್ಲರನಪ್ಪಿದನ-
ಕ್ಕರಿನಲಿ ದಶರಥ-
ನರಪತಿಯೆದ್ದು ೩೩

ತಂದೆಗೆ ಮೆಲ್ನುಡಿ-
ಯಿಂದಾರಘುವರ-
ನೆಂದನು ನಮ್ರತೆ-
ಯಿಂದೆ ದೃಢಮತಿ ೩೪

"ವನವಸತಿಗೆ ನಡೆ-
ದೆನು ನಿಮ್ಮನುಶಾ-
ಸನದಿಂದೈ, ಜನ-
ಕನೆ, ಸತ್ಯಾತ್ಮಾ ! ೩೫

"ಇನಿಯುಳು ಜಾನಕಿ-
ಯನುಜನು ಲಕ್ಷ್ಮಣ-
ನನುಸರಿಸುವರೆ-
ನ್ನನು ಕಾನನಕೆ ೩೬

"ಇರಲಿವರಿಗೆ, ಭೂ-
ವರ, ನಿಮ್ಮನುಮತಿ
ಬರಲೆನ್ನೊಡನಿ-
ಲ್ಲಿರಲಿಚ್ಛಿಸರು" ೩೭

ಕ್ಷಿತಿಪತಿ ಬಾಷ್ಪ-
ಪ್ಲುತನಾದನು, ಬಿ-
ಕ್ಕುತೆ ನುಡಿದನು ರಘು-
ಪತಿಯೆಂದುದಕೆ ೩೮

"ಕ್ಷಮಿ ಸತ್ಯಪರಾ-
ಕ್ರಮಿ, ಸುತ, ನೀನೈ !
ಕ್ಷಮಿಸಪರಾಧಿಯ-
ನಮಿತಗುಣಾಬ್ಧೀ ೩೯

"ಹಳುವದೊಳೆಳವು-
ಕ್ಕಳನಿಂತಾರೈ
ಕಳುಹುವ ನಿರ್ದಯ-
ರಿಳೆಯೊಳಗಿಹರು ? ೪೦

"ವನಕಟ್ಟುವುದಕೆ,
ಜನಕಾತ್ಮಜೆ, ತಂ-
ದೆನೆ ನಿನ್ನನು ಜನ-
ಕನ ಮನೆಯಿಂದೆ ! ೪೧

"ಹಗೆಯುವೊಲೆಂತಡ-
ವಿಗೆ ನೂಕುವುದೈ,
ಸುಗುಣಿಯೆ, ನಿನ್ನನು,
ಮಗು, ಸೌಮಿತ್ರೀ ! ೪೨

"ಇರುವುದೆ ಧರ್ಮದ
ಪರಿಪಾಲನೆಗೀ-
ತೆರದಾಪತ್ತಾಗ-
ಳುರಿ ಮನುಜನಿಗೆ ? ೪೩

"ಅತಿದಾರುಣವೈ
ಸುತರ ವಿಯೋಗವು !
ಸುತರ ವಿಯೋಗದೆ
ಮೃತಿಗೊಳಗಹೆನು ! ೪೪

“ಆಗುವುದಾಗಲಿ,
ಭೋಗಿಪೆನಡವಿಗೆ
ಹೋಗಿರಿ, ನಿಮಗಿ–
ನ್ನಾಗಲಿ ಶುಭವು !” ೪೫

ನರಪತಿ ನುಡಿಯುತ–
ಲಿರಲಿಂತಂತಃ–
ಪುರದೆಲ್ಲಾ ಸ್ತ್ರೀ–
ಯರು ಕೂಡಿದರು ೪೬

ವ್ಯಾಕುಲನಾದನು
ಶೋಕದಲತ್ತನು
ಪ್ರಾಕೃತರಂತಾ–
ಸಾಕೇತಪತಿ ! ೪೭

ನುಡಿದನು ರಘುವರ–
“ನಡವಿಯೊಳಾವುದು
ಎಡರಹುದೈ ನಿ–
ಮ್ಮಡಿಯ ಕೃಪೆಯಿರೆ ? ೪೮

“ಎನ್ನಗಲಿಕೆಯಿಂ–
ದಿನ್ನು, ನೃಪೇಂದ್ರ, ವಿ–
ಪನ್ನೆ ಜನನಿಯುಹ–
ಳುನ್ನತಶೀಲೆ ೪೯

"ಅವಳ ಮನದ ಶೋ-
ಕವನಾರಿಸುವುದು,
ಅವನೀಪತಿ, ನೀ-
ಡುವುದೆನಗಿದನು !" ೫೦

ಎನಿತೋ ರಘುವೀ-
ರನ ವಾತ್ಸಲ್ಯವು !
ಜನನಿಯಿರುವಳಾ-
ತನ ಜೀವಿತವು ! ೫೧

ಇದು ನವಮಾಧ್ಯಾಯವು

ಶ್ರೀಃ

## ದಶಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಜನನಾಥನು ಸೂ-
ತನನು ಕರೆದು ನುಡಿ-
ದನು, "ತಾರೈ ರಥ-
ವನು ಮಕ್ಕಳಿಗೆ" ೨

ಹೊರಟನು ಸೂತನು
ತರಲು ರಥವ, ಭೃ-
ತ್ಯರು ತಂದರು ಚೀ-
ವರಗಳನಲ್ಲಿ ೩.

ನುಡಿದಳು ಕೇಕಯಿ,
"ತಡೆಯದೆ ನೀವಿವ-
ನುಡುವುದು ಮೂವರು
ನಡೆವುದಡವಿಗೆ !" ೪

ಅಸುಮಾನಿಸದೇ-
ಸನು ನುಡಿಯದೆ ರಾ-
ಮನು ಕೊಂಡನು ತೊ-
ಟ್ಟನು ಚೀರವನು ೫

ಧರಿಸಲು ಲಕ್ಷ್ಮಣ-
ನರಿಯನದನು ರಘು-
ವರನುಡಿಸಿದನೆ-
ಲ್ಲರು ನೋಡುತಿರೆ ೬

ಜನಕಜೆ ಕೋಮಲ-
ತನು ಚೀವರದ-
ರ್ಶನಕೆ ನುಗಿದು ಕಂ-
ಬನಿದುಂಬಿದಳು! ೭

ಗುರು ನೋಡಿದರೆಂ-
ದರು ಕೈಕೇಯಿಗೆ,
"ಪರುಷಾಶಯೆ! ನಿ-
ಷ್ಠುರತೆಯಿದಲ್ತೇ? ೮

"ಈಕುಶಚೀರವ-
ದೇಕೌ ಸೀತೆಗೆ?
ಏಕೀದುರ್ಮತಿ,
ಕೇಕಯಿ, ನಿನಗೆ? ೯

"ಜನಪನು ವಿಧಿಸಿದ
ವನವಾಸವು ರಾ-
ಮನಿಗಹುದೌ, ಅದು
ಜನಕಜೆಗಲ್ತು ! ೧೦

"ಇರಲಿವಳೊಡನಾ-
ಭರಣಗಳೆಲ್ಲವು,
ಇರಲೆಲ್ಲಾ ಸುಂ-
ದರವಸ್ತ್ರಗಳು !" ೧೧

ಹೆದರಿದಳಾದು-
ರ್ಮದೆ ಕುಲಗುರುವೆಂ-
ದುದಕಾದೊಡೆ ನಾ-
ಚಿದಳಿಲ್ಲವಳು ೧೨

"ಗುರುವಾಡಿದ ನುಡಿ
ಸರಿ, ಸೀತೆಗೆ ಚೀ-
ವರವನುಚಿತವೆಂ"
ದರಸು ನುಡಿದನು ೧೩

ತರಿಸಿದನಿಂತೆಂ-
ದರಸನು ವಸ್ತ್ರಾ-
ಭರಣತತಿಯುನ-
ಲ್ಕರಿಸಲಿ ಸೊಸೆಗೆ ೧೪

'ಬಂದು ಸುಮಂತ್ರನು
ಮಂದೋತ್ಸಾಹನು,
''ಬಂದಿಹುದೈ ರಥ-
ವೆಂ''ದು ನುಡಿದನು ೧೫

ಒದವಿತು ಹಾಹಾ-
ರುದಿತಧ್ವನಿಯೊ-
ಮ್ಮೊದಲೆ ಸುಖದ ಸದ-
ನದೊಳಾನೃಪನಾ ! ೧೬

''ಅಕಟಾ ! ನಡೆದನು
ಸುಕೃತಿಯಿವನು ವಿಪಿ-
ನಕೆ ಕೋಮಲೆ ಜಾ-
ನಕಿಯೊಡನಿಂದು ! ೧೭

''ಇವರೆಮ್ಮಯ ಜೀ-
ವವು ಮೂವರಲೇ !
ಇವರನಹಹ ತೊಲ-
ಗುವುದೆಮಗಾಯ್ತೇ ! ೧೮

''ಇವರು ಸುಖೋಚಿತ-
ರಿವರಿಗೆ ವನವಾ-
ಸವು ಬಂದುದು ! ದೈ-
ವವು ನಿರ್ಘೃಣವು ! ೧೯

"ಆರಿಹರ್ರೈ ಸುಕು-
ಮಾರರನಿವರನು
ಆರಯ್ವರು ಕಾಂ-
ತಾರದೊಳಲ್ಲಿ ?" ೨೦

ಒರಲಿದರಂಗನೆ-
ಯರು ಬಾಯಳಿದ-
ತ್ತರು ! ತಡೆಯಲಿಕಾ-
ರರು ಶೋಕವನು ! ೨೧

ಲಲನಾಜನದಾ-
ಪ್ರಲಪನದಿಂದೆ ವಿ-
ಚಲವಾಗದು ರಘು-
ತಿಲಕನ ಮನವು ೨೨

ನುಡಿದನು ಕೈಮುಗಿ-
"ದಡವಿಗೆ ಹೊರಡಲು
ತಡವಹುದಳಲನು
ಬಿಡುವುದು ನೀವು ೨೩

"ಇರೆ ನಿಮ್ಮೆಲ್ಲರ
ಕರುಣೆ, ಸುರಕ್ಷಿತ-
ರಿರುವೆವು ವನದಲಿ
ಕೊರತೆಯೊದಗದು" ೨೪

ಸುಲಲಿತಗಾತ್ರಿಯು–
ಸೊಲಿದಪ್ಪೀತೆರ–
ದಲಿ ನುಡಿದಳು ಮಂ–
ಗಲೆ ಕೌಸಲ್ಯೆ  ೨೫

"ಅವನಿಜೆ, ನಿನ್ನದು
ಕುವರರನಾರಯಿ–
ಸುವ ಹೊಣೆಯಿಂದಿಸ
ದಿವಸದಿ, ಮಗಳೇ !"  ೨೬

ಅದಕೆಂದಳು ಗ–
ದ್ಗದಕಂಠಿ ವಿದೇ–
ಹದ ರಾಜನ ಸುತೆ
ಮೃದುಮಧುವಚನೆ  ೨೭

"ಇವರಿರ್ವರ ಜೀ–
ವವು ನನ್ನಯ ಜೀ–
ವವು, ತಾಯೇ, ಇಹ–
ರಿವರೆನ್ನುಸಿರು !  ೨೮

"ಇರುತಿರೆ ನಿಮ್ಮಯ
ಹರಕೆಯ ಬಲವೆಮ–
ಗಿರುವುದದಾವುದು
ಕೊರತೆ ವನದಲಿ ?"  ೨೯

ವಂದಿಸಿ ಬಳಿಯುಲಿ
ನಿಂದಿಹ ತನಯುನಿ-
ಗೆಂದಳು ಮನದೊಲ-
ವಿಂದೆ ಸುಮಿತ್ರೆ ೩೦

"ತನಯುನೆ, ರಘುನಾ-
ಥನು ಪಿತನಹನ್ಯೆ
ನಿನಗಡವಿಯುಲೀ-
ಜನಕಜೆ ಮಾತೆ ೩೧

"ನೆರಳೆಂತಂತನು-
ಸರಿಸಿವರನು, ಮಗು,
ಇರಲೈ ನಿನಗೆ-
ಚ್ಚರು ಸಂತತವು" ೩೨

ಜನನಿಯು ನುಡಿಗಾ-
ತನು ಪೊಲ್ನುಡಿಯುಲಿ
ವಿನಯುದಲಿಂತೆಂ-
ದನು ತಲೆವಾಗಿ ೩೩

"ಇದು ಪಾವನವಾ-
ದುದು ನುಡಿ ನಿಮ್ಮದು,
ಹೃದಯುದಲಿರಿಸುವೆ-
ನಿದನವಿರತವು" ೩೪

ಎನುತಿರಲಿಂತಾ-
ತನು, ಕರೆದು ಸುಮಂ-
ತ್ರಸನಾತನಿಗೆಂ-
ದನು ರಘುವರನು ೩೫

"ತಡವಾಗುತಲಿಹು-
ದಡವಿಗೆ ಹೊರಡಲು,
ನಡೆ ಬೇಗನೆ ರಥ-
ದೆಡೆಗೆ, ಸುಮಂತ್ರಾ !" ೩೬

ಎಂದಿಂತಾರಘು-
ನಂದನನಾಯೆಡೆ-
ಯಿಂದಲಿ ಹೊರಗೈ-
ತಂದನು ರಥಕೆ ೩೭

ಇದು ದಶಮಾಧ್ಯಾಯವು

ಶ್ರೀಃ

## ಏಕಾದಶಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

"ಹೊರಟರು ರಘುವೀ-
ರರು ವನಕಕಟಾ !
ಹೊರಟಳಿದೋ ಸುಂ-
ದರಿ ವೈದೇಹಿ ! ೨

"ಮೆಲ್ಲನೆ ನಡೆಯಿಸು
ನೆಲ್ಲನೆ ರಥವನು !
ಇಲ್ಲಿಯೆ ವೇಗವೆ ?
ಕಲ್ಲೆದೆಯವನೇ ! ೩

"ಎಲೆ ಇನ್ನೊಂದೇ
ಸಲವಿವರನು ನೋ-
ಡಲು ಬಯಸುವೆವೈ
ಲಲಿತಾಂಗರನು !" ೪

ಎನುತಳಲುತೆ ಕಂ–
ಬನಿಗರೆಯುತೆ ರಥ–
ವನು ಪುರವಾಸಿಗ–
ಳನುಸರಿಸಿದರು ೫

"ಸಾಗಿಸು ವೇಗದೆ
ಸಾಗಿಸು ! ಜನರನು–
ರಾಗವಿದಿನ್ನತಿ–
ಯಾಗುವುದಯ್ಯಾ ! ೬

"ತಡೆಯುಲೆಳಸುತೆನ–
ಗೆಡರಾಗುತಲಿಹ–
ರೆಡೆಯೆಡೆಗೀಜನ–
ಕೆಡೆಗುಡಬೇಡೈ ! ೭

"ಅಕಟಾ ! ಉನ್ಮಾ–
ದಕೆ ವಶರಾದರು
ಸಕಲರು ! ಚಿತ್ತದ
ವಿಕೃತಿಯಿದೆನಿತೋ !" ೮

ಎನೆ ರಘುಶಾರ್ದೂ–
ಲನದೇನೋಡಿಸಿ–
ದನೊ ಸಾರಥಿ ರಥ–
ವನು ವೇಗದಲಿ ! ೯

ಅಳಿದುದಯೋಧ್ಯೆಯ
ಬೆಳಕೆಲ್ಲಿಯುಂ ಬಾ–
ಯುಳಿದತ್ತಿತು ಬಲು
ಬಳಲಿತು ಜನವು ! ೧೦

ಕವಿದುದು ರಣರಣ–
ಕವು ಪೌರರ ಹೃದ–
ಯುವನು, ಪುರವು ವೈ–
ಕ್ಲವಕೆಡೆಯಾಯ್ತು ೧೧

ರವಿ ಮುಗಿಸಿದನಾ–
ದಿವಸದ ನಿಜಕಾ–
ರ್ಯವನೊಯ್ಯನೆ ಭವ–
ನವನೈದಿದನು ೧೨

ಅದಿರೆ ನೆಲವು ವೇ–
ಗದಲಿ ರಥವು ಬಂ–
ದುದು ತಮಸೆಯ ತಡಿ–
ಗದೊ ರಘುವರನಾ ೧೩

"ಇದು ನಮ್ಮ ವಿವಾ–
ಸದ ಮೊದಲನೆಯಿರು–
ಳಿದನಿಲ್ಲಿಯೆ ತೀ–
ರದಲಿ ಕಳೆವೆವು ೧೪

"ಹರಿವುದು ನದಿ ನ–
ಲ್ದೆರೆಗಳಿನುಗುವಿಂ–
ಚರದ ಸೊಬಗು ತುಂ–
ಬಿರೆ ಮಂದಗತಿ ೧೫

"ಸುಳಿವುವು ವನಸುಮ–
ಗಳ ಮೃದುಮಧುಪರಿ–
ಮಳವನು ಹರವುತ–
ಲೆಳಗಾಳಿಗಳು ೧೬

"ಎನಿತಾಗಸದೊಳು
ಮಿನುಗುವ ತಾರೆಗ–
ಳನಿತೀಜಲದೊಳು
ಮಿನುಗುತಲಿಹುವು ! ೧೭

"ಇದು ಸುಂದರವಾ–
ದುದು ಸಾಧುವ ಹೃದ–
ಯದವೊಲು ಸುವಿಮಲ–
ನದಿ ಸೌಮಿತ್ರೀ ! ೧೮

"ಜಲವಿಂದೀಯೆಡೆ–
ಯಲಿ ನಮಗಶನವು,
ಮಲಗಲು ಹಾಸಿಗೆ–
ಯೆಲೆಯೊಣಹುಲ್ಲು" ೧೯

ಎಂದೆನುತಿರೆ ರಘು–
ನಂದನನಲ್ಲಿಗೆ
ಬಂದರು ಪೌರರು
ಸಂದಣಿಗೊಂಡು ೨೦

“ತೊರೆದೆಮ್ಮನು ರಘು–
ವರ, ಕರುಣಾಕರ,
ತೆರಳುವುದೇ ಮೂ–
ವರೆ ಕಾನನಕೆ ?” ೨೧

ಎನುವ ಜನಕೆ ನುಡಿ–
ದನು ರಾಮನು, “ಬ–
ಲ್ಲೆನು ನಿಮ್ಮೊಲುಮೆಯ–
ಸನುರಾಗವನು ೨೨

“ಕ್ಷಿತಿಪತಿ ಸತ್ಯ–
ವ್ರತಿವರನೆನ್ನಯ
ಪಿತನಹನವನಾ–
ಣತಿ ಶರಣೆನಗೆ ೨೩

“ವನಕೆಮ್ಮನು ನೀ–
ವನುಸರಿಸುವುದಿಂ–
ತನುಚಿತವಿದರಿಂ–
ದೆನಗೆಡರಹುದು ೨೪

“ಭರತನು ಧರ್ಮಿಗ–
ಳರಸನು, ನೀವಿ–
ನ್ನಿರಿಸುವುದೀಯು–
ಕ್ಕರನಾತನಲಿ ೨೫

“ಕಳೆದಿಲ್ಲಿರುಳನು
ಬೆಳಗಾದೊಡನೆಯೆ
ಹೊಳಲಿಗೆ ತಿರುಗುವು–
ದಳಲನು ತೊರೆದು ೨೬

“ಮಲಗುವುದಿನ್ನೆಂ”–
ದೊಲವಲರಿಪ ನುಡಿ–
ಯಲಿ ನುಡಿದೊಣಹು–
ಲ್ಲಲಿ ಮಲಗಿದನು ೨೭

ಅಲ್ಲಿಯೆ ಮಲಗಿದ–
ರೆಲ್ಲರು ತಡಿಯೆಡೆ–
ಯಲ್ಲಿಯೆ ಪೌರರು
ಹುಲ್ಲಲಿ ದಣಿದು ೨೮

ಇರುಳರ್ಧವು ಸರಿ–
ದಿರೆ, ರಾಮನು ಕ–
ಣ್ದೆರೆದನುಜನನೆ–
ಚ್ಚರಿಸಿ ನುಡಿದನು ೨೯

''ತೊರೆದೆಮ್ಮನು ಜನ-
ರಿರಲೊಲ್ಲರು! ಮಲ-
ಗಿರುತಿರುವಿವರನು
ತೊರೆವೆನು ನಾನು ! ೩೦

''ಅನುಜನೆ, ನೀನಾ-
ರ್ಯನಿಗೆ ಸುಮಂತ್ರನಿ-
ಗನುಗೊಳಿಸಲು ರಥ-
ವನು ಹೇಳುವುದು'' ೩೧

ಎನೆ, ಬಂದು ಸುಮಂ-
ತ್ರನಿಗೆ, ''ವರೂಥವ-
ನನುಗೊಳಿಸೈ'' ಎಂ-
ದನು ಲಕ್ಷ್ಮಣನು ೩೨

ಅದೊ ಮೆಲ್ಲನೆ ದಾ-
ಟಿದುದು ವರೂಥವು
ನದಿಯನು, ಮುಂಬರಿ-
ದುದು ಭರದಿಂದೆ ! ೩೩

ಸಾಗಿತು ವನದೊಳ-
ಗಾಗಳೆ ಮುಂಬೆಳ-
ಗಾಗುವ ಮುನ್ನವೆ
ವೇಗದೆ ರಥವು ೩೪

ಇತ್ತಲು ಜನರೆ-
ಚ್ಚತ್ತರು, ಕಣ್ದೆರೆ-
ದೆತ್ತಲು ನೋಡೆ, ರ-
ಘೂತ್ತಮನಿಲ್ಲಾ ! ೩೫

"ಅಕಟಾ ! ನಿದ್ರೆಯ
ವಿಕೃತಿಗೆ ನಾವೇ-
ತಕೆ ವಶರಾದೆವೊ !
ವಿಕಟವಿದಾಯ್ತು ! ೩೬

"ತೊರೆದೆಮ್ಮನು ಮಲ-
ಗಿರುವವರನು ರಘು-
ವರನು ವಿಪಿನದಲಿ
ತೆರಳಿದನಯ್ಯೋ !" ೩೭

ಮರುಗಿದರಿಂತ-
ತ್ತರು ಶೋಕದೆ ಪೌ-
ರರು ಸಾಕೇತಕೆ
ತಿರುಗಿ ನಡೆದರು ೩೮

ಇದು ಏಕಾದಶಾಧ್ಯಾಯವು

ಅಯೋಧ್ಯಾಕಾಂಡದ
—: **ಪೂರ್ವಾರ್ಧವು ಸಮಾಪ್ತವು**:—